# ಡಾ. ಬಸವರಾಜ ಸಬರದರ ನಾಟಕಗಳು ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು :

ರಮಾಕಾಂತ ಕಾರಾಮುಂಗೆ

ಎಂ.ಎ.

ಮಾರ್ಗದರ್ಶಕರು

ಡಾ. ಜಗನ್ನಾಥ ಹೆಬ್ಬಾಳೆ

ಎಂ.ಎ., ಎಂ.ಫಿಲ್., ಪಿ.ಎಚ್.ಡಿ.
ನಿರ್ದೇಶಕರು
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583 276

2007

# ಡಾ. ಬಸವರಾಜ ಸಬರದರ ನಾಟಕಗಳು ಒಂದು ಅಧ್ಯಯನ

(ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ ಬೀದರ ಇವರಿಗೆ
ಎಂ.ಫಿಲ್. ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು :

ರಮಾಕಾಂತ ಕಾರಾಮುಂಗೆ

ಎಂ.ಎ.

ಮಾರ್ಗದರ್ಶಕರು

ಡಾ. ಜಗನ್ನಾಥ ಹೆಬ್ಬಾಳೆ

ಎಂ.ಎ., ಎಂ.ಫಿಲ್., ಪಿ.ಎಚ್.ಡಿ.
ನಿರ್ದೇಶಕರು
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ





ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – 583 276

2007

# ಪ್ರಮಾಣ ಪತ್ರ

**"ಡಾ. ಬಸವರಾಜ ಸಬರದರ ನಾಟಕಗಳು ಒಂದು ಅಧ್ಯಯನ"** ಎಂಬ ನಿಬಂಧವನ್ನು ಡಾ. ಜಗನ್ನಾಥ ಹೆಬ್ಬಾಳೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಕ.ರಾ.ಶಿ. ಸಂಸ್ಥೆಯ ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ ಇವರಿಗೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಬೀದರ

ದಿನಾಂಕ: 7-1-2008

**ರಮಾಕಾಂತ ಕಾರಾಮುಂಗೆ**

ಎಂ.ಫಿಲ್. ವಿದ್ಯಾರ್ಥಿ

ಕ.ರಾ.ಶಿ. ಸಂಸ್ಥೆಯ

ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ, ಬೀದರ.

ಡಾ. ಜಗನ್ನಾಥ ಹೆಬ್ಬಾಳೆ
ಎಂ.ಎ. ಎಂ.ಫಿಲ್. ಪಿ.ಎಚ್.ಡಿ.
ನಿರ್ದೇಶಕರು,
ಕ.ರಾ.ಶಿ. ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನಾ ಕೇಂದ್ರ, ಬೀದರ.



Dr. Jagannath Hebbale
M.A., M.Phil., Ph.D.
Director
K.R.E. Society,
P.G. Kannada Research Center Bidar.

08482-221557 (O) : 08482-228930 (R) : Cell: 9448585344

# ಮಾರ್ಗದರ್ಶಕರ ಪ್ರಮಾಣ ಪತ್ರ

"**ಡಾ. ಬಸವರಾಜ ಸಬರದರ ನಾಟಕಗಳು – ಒಂದು ಅಧ್ಯಯನ**" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ರಮಾಕಾಂತ ಕಾರಾಮುಂಗೆ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ಬೀದರ.

ದಿನಾಂಕ: 7-1-08

ಡಾ. ಜಗನ್ನಾಥ ಹೆಬ್ಬಾಳೆ
ನಿರ್ದೇಶಕರು
ಕ.ರಾ.ಶಿ ಸಂಸ್ಥೆಯ
ಸ್ನಾತಕೋತ್ತರ ಕನ್ನಡ ಸಂಶೋಧನ ಕೇಂದ್ರ
ಬೀದರ.

# ಪರಿವಿಡಿ

ಪ್ರಮಾಣ ಪತ್ರ

ಘೋಷಣಾ ಪತ್ರ

ಭಾವಚಿತ್ರ — ಪುಟ ಸಂಖ್ಯೆ

ಅಧ್ಯಾಯ–ಒಂದು — ೧ – ೭

ಅಧ್ಯಯನ ಉದ್ದೇಶ ಮತ್ತು ವ್ಯಾಪ್ತಿ.

ಅಧ್ಯಾಯ– ಎರಡು — ೮ – ೫೫

ನಾಟಕಗಳ ಅಧ್ಯಯನ.

೧. ಅಸಂಗತ ನಾಟಕ.

೨. ಗೀತ ನಾಟಕ.

೩. ಬೀದಿ ನಾಟಕಗಳು.

೪. ದೊಡ್ಡಾಟ.

ಅಧ್ಯಾಯ–ಮೂರು — ೫೬ – ೫೯

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಡಾ. ಬಸವರಾಜ ಸಬರದರ ಸ್ಥಾನ–ಮಾನ.

ಅಧ್ಯಾಯ–ನಾಲ್ಕು — ೬೦ – ೬೪

ಸಮಾರೋಪ

ಅನುಬಂಧ — ೬೫ – ೯೩

೧. ವಿಮರ್ಶಕರ ಅಭಿಪ್ರಾಯ.

೨. ವ್ಯಕ್ತಿ ಪರಿಚಯ.

೩. ಪ್ರಶಸ್ತಿ ಪತ್ರಗಳು ಮತ್ತು ಫೋಟೋಗಳು

೪. ಗ್ರಂಥಸೂಚಿ.

## ಅಧ್ಯಾಯ–I

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಭಾರತ ದೇಶಕ್ಕೆ ತನ್ನದೆಯಾದ ಸಾಂಸ್ಕೃತಿಕ ಇತಿಹಾಸ ಇದೆ. ಈ ದೇಶದಲ್ಲಿ ಸಾವಿರಾರು ವರ್ಷಗಳಿಂದ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುತ್ತ ಬಂದಿವೆ. ಈ ದೇಶ ಸಾಹಿತಿಕವಾಗಿ ಶ್ರೀಮಂತವಾಗಿದೆ. ಇಲ್ಲಿ ಅನೇಕ ಮಹಾಕಾವ್ಯಗಳು, ಪುರಾಣಗಳು, ಕಥೆ, ಕಾದಂಬರಿ, ನಾಟಕಗಳು ಇಲ್ಲಿ ಹುಟ್ಟಿಕೊಂಡಿವೆ. ಇವುಗಳಲ್ಲಿ ನಾಟಕಗಳ ಪಾತ್ರ ಬಹುಮುಖ್ಯವಾಗಿ ಕಂಡು ಬರುತ್ತವೆ. ನಾಟಕಗಳು ಭಾರತೀಯರಿಗೆ ಬಹುಪ್ರೀಯವಾದ ದೃಶ್ಯಮಾಧ್ಯಮವಾಗಿತ್ತು. ಅಕ್ಷರ ಜ್ಞಾನ ಇದ್ದವರಿಗೂ, ಇಲ್ಲದವರಿಗೂ ನಾಟಕಗಳು ಪರಿಣಾಮ ಬೀರುವ ಮಾಧ್ಯಮವಾಗಿವೆ. ನಾಟಕ ಸಾಹಿತ್ಯವು ಅತ್ಯಂತ ಗಮನಾರ್ಹವಾಗಿರುವ ಸಾಹಿತ್ಯವಾಗಿದೆ.

ನಾಟಕಗಳ ಅಧ್ಯಯನ ಪೂರ್ವದಲ್ಲಿ ನಾವು ಸಂಸ್ಕೃತ ನಾಟಕಗಳ ಪರಂಪರೆಯನ್ನು ಅವಲೋಕಿಸುವುದು ಸೂಕ್ತವೆನಿಸುತ್ತದೆ. "ಸಂಸ್ಕೃತ ಸಾಹಿತ್ಯವು ನಾಟಕಕ್ಕೆ ಶ್ರೇಷ್ಠವಾದ ಸ್ಥಾನನೀಡಿದೆ. ಸಾಹಿತ್ಯ ಸೋಪಾನದಲ್ಲಿ ಅದು ಎಲ್ಲಕ್ಕಿಂತಲೂ ಮೇಲಿನ ಮೆಟ್ಟಲು ಎಂದು ನಮ್ಮವರು ಭಾವಿಸಿದ್ದಾರೆ[(೧)]". "ಸಂಸ್ಕೃತದ ಅಲಂಕಾರಿಕರು ಕಾವ್ಯವನ್ನು 'ದೃಶ್ಯ'ವೆಂದು 'ಶ್ರವ್ಯ'ವೆಂದು ಎರಡು ವಿಭಾಗ ಮಾಡಿ ನಾಟಕಾದಿ ಪ್ರಬಂಧಗಳನ್ನು 'ದೃಶ್ಯ'ವಾಗಿ ಎಣಿಸುವರು. ದೃಶ್ಯವೆಂದರೆ ನೋಡತಕ್ಕದ್ದು[(೨)]" ಎಂದು ಹೇಳಿದ್ದಾರೆ.

"ಸಂಸ್ಕೃತ ನಾಟಕ ಪರಂಪರೆಯಲ್ಲಿ 'ಅಶ್ವಘೋಷ'ನು ಒಬ್ಬ ನಾಟಕಕಾರ ಎಂಬುವುದು ಇತಿಹಾಸದಿಂದ ತಿಳಿದುಬರುತ್ತದೆ". ಅವನ ಮೂರು ಬೌದ್ಧ ನಾಟಕಗಳು ಭಾಗವನ್ನು ಗುರುತಿಸಬಹುದು[(೩)]. ಮುಂದೆ 'ಭಾಸ'ನ ಅನೇಕ ನಾಟಕಗಳಲ್ಲಿ ಸ್ವಪ್ನ ನಾಟಕವೂ ಒಂದಾಗಿದೆ ಹಾಗೂ'ಶೂದ್ರಕನ' 'ಮೃಚ್ಛಕಟಿಕ' ನಾಟಕವು, 'ಕಾಳಿದಾಸ' ಶಾಕುಂತಲ ನಾಟಕವು, 'ವಿಶಾಖಾದತ್ತನ' 'ಮುದ್ರಾರಾಕ್ಷಸ' ಹೀಗೆ ಇವರು ಭಾರತದ ಸಂಸ್ಕೃತ ನಾಟಕದ ಪ್ರಸಿದ್ಧವಾದ ನಾಟಕಾರರು ಇವರ ಕಾಲ ಕ್ರಿ.ಶ. ಪೂರ್ವದಿಂದ ಕ್ರಿ.ಶ. ೫೦೦ ವರ್ಷಗಳ ವರೆಗೆ ಹರಡಿದೆ.

ಕ್ರಿ.ಶ. ೭ನೇ ಶತಮಾನದಲ್ಲಿ ವರ್ಷವರ್ಧನ 'ಪ್ರೀಯದರ್ಶಿಕಾ' 'ರತ್ನಾವಳಿ' 'ನಾಗಾನಂದ' ಎಂಬ ಮೂರು ನಾಟಕಗಳನ್ನು ರಚಿಸಿದ. ಇವನಂತೆ 'ಭವಭೂತಿ'ಯು 'ಮಹಾವೀರ ಚರಿತೆ' 'ಮಾಲತಿ ಮಾದವ' 'ಉತ್ತರ ರಾಮಚರಿತ' ಎಂಬ ನಾಟಕಗಳನ್ನು ರಚಿಸಿದ. ಭಟ್ಟನಾರಾಯಣನು

---

೧. ಸಂಸ್ಕೃತ ನಾಟಕ–ಎ.ಆರ್. ಕೃಷ್ಣಶಾಸ್ತ್ರ ಪುಟ–೩.

೨.೩. ಸಂಸ್ಕೃತ ನಾಟಕ–ಎ.ಆರ್. ಕೃಷ್ಣಶಾಸ್ತ್ರ ಪುಟ–೩.

ತನ್ನ 'ವೇಣೀ ಸಂಹಾರ'ಎಂಬ ನಾಟಕವನ್ನು ರಚಿಸಿದ. ಮುಂದೆ ರಾಜಶೇಖರನು 'ಬಾಲರಾಮಾಯಣ', 'ಬಾಲಭಾರತಗಳು' ರಚಿಸಿದ್ದಾನೆ. ಹೀಗೆ ಸಂಸ್ಕೃತ ನಾಟಕ ಪರಂಪರೆಯನ್ನು ನೋಡಬಹುದು. ಕರ್ನಾಟಕದಲ್ಲಿ ೮ನೇ ಶತಮಾನದ ರಚನೆಗೊಂಡ ಕನ್ನಡದ ಮೊಟ್ಟ ಮೊದಲನೆ ಉಪಲಬ್ಧ ಗ್ರಂಥವಾದ 'ಕವಿರಾಜ ಮಾರ್ಗ'ದಲ್ಲಿ ಹೇಳಲಾದ ಪ್ರಾಚೀನ ರೂಪಗಳಾದ 'ಗದ್ಯಕಥೆ' 'ಬೆದಂಡೆ', 'ಚತ್ತಾಣ' 'ಪಗರಣ'ವೆಂಬ ರೂಪಗಳನ್ನು ಹೇಳಿದ್ದಾರೆ. ಈ ಶಬ್ದ ನಾಟಕಕ್ಕೆ ಸಂಬಂಧಿಸಿದೆ ಎಂಬುವುದು ಕಂಡು ಬಂದಿದೆ. ೧೦ ನೇ ಶತಮಾನದಲ್ಲಿ 'ವಡ್ಡಾರಾಧನೆ', 'ಆದಿಪುರಾಣ', ಮುಂತಾದ ಕೃತಿಗಳಲ್ಲಿ ಉಲ್ಲೇಖವಾದ ನಾಟಕದ ಅಂಶಗಳನ್ನು ಕಾಣಬಹುದು. ೧೨ ನೇ ಶತಮಾನದಲ್ಲಿ ವಚನಕಾರರಲ್ಲಿ ಬಹುರೂಪಿ ಚೌಡಯ್ಯನ ನಾಟಕ ಪ್ರದರ್ಶನಕಾರನಾಗಿದ್ದನು ಎಂಬುವುದು ಗುರುತಿಸಬಹುದು.

ಕರ್ನಾಟಕದ ಮಧ್ಯ ಯುಗದ ಕಾಲದಲ್ಲಿ ಕ್ರಿ.ಶ. ೧೬೮೦ ರಲ್ಲಿ ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿ ಸಿಂಗರಾರ್ಯನಿಂದ ರಚಿತವಾದ "ಮಿತ್ರವಿಂದಾ ಗೋವಿಂದ" ಎಂಬ ಕನ್ನಡದ ಮೊಟ್ಟಮೊದಲನೆ ನಾಟಕವೆಂದು ಗುರುತಿಸಲಾಗಿದೆ. ಇದು ಸಂಸ್ಕೃತದ ಶ್ರೀ ಹರ್ಷನಿಂದ ರಚಿತವಾದ 'ರತ್ನಾವಳಿ' ನಾಟಕದ ಅನುವಾದ.

ನಾಟಕ ಸಾಹಿತ್ಯ ಹುಲುಸಾಗಿ ಬೆಳೆದದ್ದು ೧೯ನೇ ಶತಮಾನದ ಅಂತ್ಯದಲ್ಲಿ. ಮೈಸೂರಿನ ಚಾಮರಾಜ ಒಡೆಯರ ಆಳ್ವಿಕೆ ಕಾಲ (೧೮೮೧ ರಿಂದ ೧೮೯೪)ದಲ್ಲಿ ಪಾರಸೀ ಕಂಪನಿಯೊಂದು ಕನ್ನಡ ನಾಡಿಗೆ ಬಂದು ಕೆಲವು ನಾಟಕಗಳನ್ನು ಪ್ರವೇಶಿಸಿದವು. ಕಲೆಗೆ ಆಶ್ರಯ ಸ್ಥಾನವಾಗಿದ್ದ ಅರಮನೆ ೧೯೮೨ ರಲ್ಲಿ ತನ್ನದೇಯಾದ ಶ್ರೀ ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ ಎಂಬ ನಾಟಕ ಸಂಸ್ಥೆಯನ್ನು ಸ್ಥಾಪಿಸಿತು. ಒಡೆಯರ ಆಸ್ಥಾನ ಕವಿಯಾಗಿದ್ದ ಬಸಪ್ಪಾ ಶಾಸ್ತ್ರಿಗಳು ಈ ಸಭೆಗಾಗಿ ನಾಟಕಗಳನ್ನು ಬರೆಯಲು ಸಿದ್ಧರಾದರು. ಇದರಿಂದಾಗಿ ಶಾಕುಂತಲಾ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರಾಮಚರಿತ್ರೆ, ಮಾಲತೀ ಮಾಧವ, ಚಂಡ ಕೌಶಿಕ, ಮೊದಲಾದ ನಾಟಕಗಳು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಗೊಂಡವು. ಮುಂದೆ ಇಂಗ್ಲೀಷ ನಾಟಕಗಳ ಕಡೆಗೂ ಗಮನ ಹರಿಸಿ ಸೆಕ್ಸಪಿಯರನ 'ಒಥೆಲೊ' ನಾಟಕವನ್ನು 'ಶೂರಸೇನನ ಚರಿತ್ರೆ'ಯಾಗಿ ಕನ್ನಡಕ್ಕೆ ತಂದನು. ಮುಂದೆ ಸಂಸ್ಕೃತ ನಾಟಕಕಾರರಾದ ಕಾಳಿದಾಸ, ಭಾಸ, ಭಟನಾರಾಯಣ, ಶೂದ್ರಕ, ಶ್ರೀಹರ್ಷ ಮೊದಲಾದವರ ಸಂಸ್ಕೃತ ನಾಟಕಗಳನ್ನು ಕನ್ನಡಕ್ಕೆ ಎಲ್. ಗುಂಡಪ್ಪಾ, ಕೆ. ಕೃಷ್ಣಮೂರ್ತಿ, ಎಸ್.ವಿ.

ಪರಮೇಶ್ವರ ಭಟ, ಸಿ.ಪಿ.ಕೆ., ಎಂ. ವಾಸುದೇವ ಭಟ, ಗಣಪತಿ ಮೂಳಿಯಾರ್, ಪಂಡಿತ ಕವಲಿ ಮೊದಲಾದವರು ಕನ್ನಡ ತಂದರು.

ಸಂಸ್ಕೃತದಿಂದ ನಾಟಕಗಳು ಅನುವಾದಗೊಂಡಂತೆ ಇಂಗ್ಲೀಷನಿಂದಲೂ ಕನ್ನಡಕ್ಕೆ ಅನುವಾದಗೊಂಡವು. ಇಲ್ಲಿ ಕೆಲವು ಮೂಲದಲ್ಲಿದ್ದಂತೆ ಅನುವಾದ ಮಾಡಿದರೆ ಕೆಲವರು ರಂಗ ಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅನುವಾದ ಮಾಡಿದರು. ೧೮೯೦ ರ ಸುಮಾರಿನಲ್ಲಿ ಎಂ.ಎಲ್. ಶ್ರೀ ಕಂಟೇಶ ಗೌಡರು ಸೆಕ್ಸಪಿಯರನ 'ಮ್ಯಾಕ್ಸ್‌ಬೆತ್' ಹಾಗೂ 'ಎ ಮಿಡ್ ಸಮ್ಮರ್ ನೈಟ್ ಡ್ರೀಮ್' ನಾಟಕಗಳನ್ನು 'ಪ್ರತಾಪರುದ್ರ ದೇವ' ಹಾಗೂ 'ಪ್ರಮೀಳಾರ್ಜುನಿಯ' ಎಂಬ ಹೆಸರುಗಳಿಂದ ಕನ್ನಡಕ್ಕೆ ತಂದರು.

ಸೆಕ್ಸಪಿಯರನ ಟೆಂಪೆಸ್ಟ್ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ 'ಬಿರುಗಾಳಿ' ಎಂಬ ಹೆಸರುಹೊತ್ತು ಕುವೆಂಪು ಅವರಿಂದ ಒಂದು ಒಳ್ಳೆಯ ಅನುವಾದವಾಗಿದೆ. 'ಹ್ಯಾಮ್ಲೆಟ್' ನಾಟಕ ಆಧರಿಸಿ ಬರೆದ 'ರಕ್ತಾಕ್ಷಿ' ಕನ್ನಡದ ಅತ್ಯುತ್ತಮ ಐತಿಹಾಸಿಕ ನಾಟಕಗಳಲ್ಲಿ ಒಂದಾಯಿತು.

ಅನುವಾದಗಳಂತೆಯೇ ಪ್ರಪಂಚದ ಬೇರೆ ಬೇರೆ ಸಾಹಿತ್ಯದಿಂದ ರೂಪಾಂತರಗೊಂಡು ಹಲವು ನಾಟಕ ಕೃತಿಗಳು ಕನ್ನಡಕ್ಕೆ ಬಂದಿವೆ. ರೂಪಾಂತರಗೊಳ್ಳುವಲ್ಲಿ ಮೂಲದ ಚೌಕಟ್ಟು ಹಾಗೆಯೇ ಇದ್ದು, ವಸ್ತು ಮತ್ತು ಪಾತ್ರಗಳು ನಮ್ಮದಾಗಿವೆ. ಹೀಗೆ ರೂಪಾಂತರಗೊಂಡಾಗ ಇವುಗಳ ಮೂಲ ಚೌಕಟ್ಟು ಇದರದಲ್ಲ ಏನಿಸುವಷ್ಟು ಕನ್ನಡದಾಗಿದೆ. ಹೀಗೆ ಈ ಹಿಂದೆ ರೂಪಾಂತರಗೊಂಡ ಸಾಮಾಜಿಕ ನಾಟಕಗಳಲ್ಲಿ ಎ.ಎನ್. ಮೂರ್ತಿರಾಯ 'ಆಷಾಢ ಭೂತಿ' ಪರ್ವವಾಣಿಯವರ 'ಬಹದ್ದೂರ ಗಂಡ', 'ವಾರ್ಷಿಕ ಉತ್ಸವ' 'ಊಂಡಾಡಿ ಗುಂಡ' ಮೊದಲಾದ ನಾಟಕಗಳು ಗುರುತಿಸಬಹುದು.

ಕನ್ನಡದಲ್ಲಿ ಮೊದಲಿಗೆ ಕಂಡುಬಂದ ನಾಟಕಗಳು ಏನಿದ್ದರೂ ಪೌರಾಣಿಕ ವಸ್ತುಗಳ ಸಂಸ್ಕೃತದಿಂದ ಅನುವಾದಗೊಂಡು ಬಂದ ನಾಟಕಗಳು ಕೆಲವು ಸ್ವತಂತ್ರವಾಗಿ ಪೌರಾಣಿಕ ನಾಟಕಗಳನ್ನು ರಚಿಸಿದರು. ಈ ರಚನೆಗಳಿಗೆ ಕಾರಣ ಕನ್ನಡ ಅಭಿಮಾನ ಹಾಗೂ ಕನ್ನಡದ ರಂಗ ಭೂಮಿಯನ್ನು ಜೀವಂತಗೊಳಿಸಬೇಕೆಂಬ, ಪ್ರಚಾರಗೊಳಿಸಬೇಕೆಂಬ ಹಂಬಲವಾಗಿತ್ತು. ಮುಖ್ಯವಾಗಿ ಉತ್ತರ ಕರ್ನಾಟಕದಲ್ಲಿ ಮರಾಠಿ ನಾಟಕಗಳು ಪ್ರದರ್ಶಿತವಾಗುತ್ತಿದ್ದಾಗ ಕನ್ನಡ ಜನ ಅವುಗಳಿಗೆ

ಮಾರು ಹೋಗುತ್ತಿದ್ದಾಗ ಕನ್ನಡ ರಂಗ ಭೂಮಿ ನಶಿಸಿ ಹೋಗಬಾರದು ಎಂಬ ಅಭಿಮಾನದಿಂದ ಮೊದಲಿಗೆ ಸ್ವತಂತ್ರ ಕನ್ನಡ ನಾಟಕಗಳು ರಚಿತವಾದವು ಎಂದು ಹೇಳಬಹುದು.

'ಗಿರಿಜಾ ಕಲ್ಯಾಣ' 'ಉಷಾಹರಣ' 'ವತ್ಸಲಾಹರಣ' ಈ ಎಲ್ಲಾ ನಾಟಕಗಳು ಶಾಂತ ಕವಿಗಳ 'ಬಯಲಾಟ' ಮಾದರಿಯಲ್ಲಿವೆ. ಇವರ ನಾಟಕದ ವಸ್ತುವನ್ನು ಪುರಾಣದಿಂದ ಆಯ್ಕೆ ಮಾಡಿಕೊಂಡಿದ್ದರು. ಇದರಲ್ಲಿಹೊಸ ದೃಷ್ಟಿಕೋನವಾಗಲೀ, ಕೌಶಲ್ಯವಾಗಲೀ ಕಂಡು ಬಂದಿಲ್ಲ. ರಂಗಭೂಮಿಗಾಗಿಯೇ ನಾಟಕ ಬರೆಯಲು ಹೊರಟವರಲ್ಲಿ 'ಬೆಳ್ಳಾವೆ ನರಹರಿಶಾಸ್ತ್ರಿ'ಗಳು ಇವರ ನಾಟಕಗಳು ರಂಗಭೂಮಿಯ ಮೇಲೆ ಯಶಸ್ವಿ ಪ್ರಯೋಗಗಳಾದವು. 'ಕೃಷ್ಣಾ ಲೀಲಾ' 'ಶ್ರೀ ಕೃಷ್ಣ ಪಾರಿಜಾತ' 'ರುಕ್ಮಿಣಿ ಸ್ವಯಂವರ' 'ಮಾರ್ಕಂಡೇಯ' 'ತುಕಾರಾಂ' ಇವು ಇವರ ಮುಖ್ಯ ರಂಗ ನಾಟಕಗಳು. ಶ್ರೀಕಂಠ ಶಾಸ್ತ್ರಿ, ನಂಜನಗೂಡು ಇವರು ಶಕ್ತಿವಂತರು ಪಾಂಡಿತ್ಯವಂತರಾಗಿದ್ದರು. ಇವರು 'ಸೀತಾಪರಿಣಯ' 'ಸೀತಾ ಸ್ವರ್ಣಮೃತ' 'ಅವಿಜ್ಞಾನ ಪ್ರದಾನ' 'ರಾಜ ಸೂಯೋಗ' ಮೊದಲಾದ ಇವರ ಪ್ರಮುಖ ನಾಟಕಗಳು.

ಬಿ.ಎಂ. ಶ್ರೀ ಕುವೆಂಪು, ಶ್ರೀನಿವಾಸ ಬೇಂದ್ರೆ, ಕೈಲಾಸಂ, ಶ್ರೀರಂಗ, ಪು.ತಿ.ನ, ಮುಂತಾದವರು ನವೋದಯ ಕಾಲದಲ್ಲಿ ಹಲವಾರು ನಾಟಕ ಕೃತಿಗಳನ್ನು ರಚಿಸುವುದರ ಮುಖಾಂತರವಾಗಿ ತಮ್ಮ ಈ ನಾಟಕವನ್ನು ಮನೋರಂಜನೆಗೆ ಸೀಮಿತಗೊಳಿಸದೇ ಪರಂಪರೆಯ ವೃತ್ತಿ ರಂಗ ಭೂಮಿಗಿಂತಲೂ ಭಿನ್ನವಾದುದ್ದೆಂದು ತೋರಿಸಿಕೊಡಲು ಯತ್ನಿಸಿದ್ದರು. ಒಂದೆಡೆ ಕೈಲಾಸಂ ಅವರೇ ಹೇಳುವಂತೆ ಅವರ ತಮ್ಮ ನಾಟಕಕ್ಕೆ ಬೇಕಾದ ವಸ್ತುವನ್ನು ದೈನಂದಿನ ಬದುಕಿನಿಂದ ಹುಡುಕಿಕೊಂಡರು[೩].

ನವ್ಯ ಘಟ್ಟಕ್ಕೆ ಬಂದಾಗ ಲಂಕೇಶ, ಕಂಬಾರ, ಚಂದ್ರಶೇಖರ ಪಾಟೀಲ, ಶಿ.ಮ. ಹಿರೇಮಠ ಮುಂತಾದವರು ನಾಟಕಗಳಲ್ಲಿ ಸಾಮಾನ್ಯ ಜನರ ಮನಕ್ಕೂ ಮನೆಗೂ ಆ ಪ್ರಯೋಗಗಳನ್ನು ಸಮೀಪಗೊಳಿಸಿದ್ದರು. ಇದರ ಇನ್ನೂ ಹೆಚ್ಚಿನ ಯಶಸ್ವಿ ಪ್ರಯತ್ನವೇ ಬೀದಿ ನಾಟಕಗಳು. ಬಂಡಾಯ ಘಟ್ಟಕ್ಕೆ ಬಂದಾಗ ವ್ಯಕ್ತಿವಾದಿ ನೆಲೆಗೆ ವಿರುದ್ಧವಾಗಿ ಸಾಮಾಜವಾದಿ ನೆಲೆಗಳಲ್ಲಿ ಆಲೋಚಿಸಿ ಬರೆದು ಬದುಕುವ ಒಂದು ಸಮಾಜಮುಖಿ ಜನಾಂಗವನ್ನು ನಿರ್ಮಾಣ ಮಾಡುವ ಧ್ಯೇಯ ಹೊಂದಿತ್ತು. ಬಂಡಾಯ ಸಾಹಿತಿಗಳು ನಾಟಕಕ್ಕೆ ಚೇತನವನ್ನು ನೀಡಿ, ಅಧಿಕ ನಾಟಕಗಳನ್ನು ರಚಿಸಿದ್ದಾರೆ. ಇವರಲ್ಲಿ ಪ್ರಮುಖರಾದವರು ಸತ್ಯಾನಂದ ಪಾತ್ರೋಟ ಇವರ 'ನಮಗ ಯಾರೂ ಇಲ್ಲೋ ಎಪ್ಪಾ ಸಾಕ್ಷಿ!'

'ಮತ್ತೊಬ್ಬ ಏಕಲವ್ಯ' 'ಹ್ವಾದವರು' ಎಂಬ ನಾಟಕಗಳು ಎಚ್.ಎಸ್. ಶಿವಪ್ರಕಾಶ ಅವರ 'ಮಹಾಚೈತ್ರ ನಾಟಕ' ಕೆ.ಎಸ್. ಭಗವಾನ, ಅನೇಕ ಪಾಶ್ಚಾತ್ಯರ ನಾಟಕವನ್ನು ಅನುವಾದಿಸಿದರು. ಅರವಿಂದ ಮಾಲಗತ್ತಿ ಇವರು 'ಈ ಹರ ಏಕೆ' ಎಂಬ ನಾಟಕವನ್ನು ರಚಿಸಿದರು. ಚಂದ್ರಕಾಂತ ಕುಶನೂರ, 'ನೂರಕ್ಕೂ' ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ.

ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಸಣ್ಣ ಕಥೆ, ಕಾದಂಬರಿ, ನಾಟಕ, ಕಾವ್ಯ, ಪ್ರಬಂಧ, ವಿಮರ್ಶೆ, ಮಕ್ಕಳ ಸಾಹಿತ್ಯ, ಅನುವಾದ ಮುಂತಾದ ಪ್ರಕಾರಗಳು ಭರದಿಂದ ಸಾಗಲು ಆರಂಭವಾಯಿತು. ಈ ಸಂದರ್ಭದಲ್ಲಿ ನಾಟಕ ಪ್ರಕಾರವು ತುಂಬಾ ಪ್ರಭಾವಪೂರ್ಣವಾಗಿ ಹೊರಹೊಮ್ಮಿ ಬಹುಜನರನ್ನು ಆಕರ್ಷಿಸಿತು. ಇದರಲ್ಲಿ ಬದುಕಿನಲ್ಲಿ ಮನೋರಂಜನೆ ನೀಡುವ ಉದ್ದೇಶ ಹೊಂದಿತು. ಮತ್ತು ಸಾಮಾಜಿಕ ಸಮಸ್ಯೆಗಳು ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ, ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಾ ಅದು ಉತ್ತುಂಗ ಶಿಖರಕ್ಕೇರಿತು. ಇಂತಹ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಹಲವಾರು ನಾಟಕಕಾರರು ತಮ್ಮ ಅನುಪಮ ಸೇವೆ ಸಲ್ಲಿಸಿದ್ದಾರೆ. ಅಂತಹ ಮಹನೀಯರಲ್ಲಿ ಡಾ. ಬಸವರಾಜ ಸಬರದರು ಒಬ್ಬರು. ಕನ್ನಡ ನಾಡಿನ ಗ್ರಾಮೀಣ ಬಡ ಕುಟುಂಬದಿಂದ ಬಂದ ಇವರು ಕನ್ನಡದಲ್ಲಿ ಎಂ.ಎ. ಪದವಿಯನ್ನು ಪಡೆದು, ಸಾಹಿತ್ಯ ಕ್ಷೇತ್ರಕ್ಕೆ ತಮ್ಮನ್ನು ತೊಡಗಿಸಿಕೊಂಡರು. ಇತ್ತೀಚಿನ ದಿನಗಳಲ್ಲಿ ನಾಟಕದ ಸ್ಥಿತಿ ಕಂಡು, ಕನ್ನಡದ ರಂಗಭೂಮಿಯನ್ನು ಕುರಿತು ಈಗಾಗಲೇ ಸುಮಾರು ೧೭ ನಾಟಕಗಳನ್ನು ಬರೆದಿದ್ದಾರೆ. ಅವುಗಳು ಇಂತಿವೆ.

೧. ಪ್ರತಿರೂಪ. ೨. ರೆಕ್ಕೆ ಮೂಡಿದಾಗ. ೩. ಬೆಳ್ಳಿ. ೪. ನರಬಲಿ. ೫. ಬೆಳ್ಳಕ್ಕಿ ಸಾಲು.

೬. ಮೂರು ಬೀದಿ ನಾಟಕಗಳಲ್ಲಿ. (೧. ಹನುಮಾಯಣ. ೨.ರಂಪಾಯಣ ೩.ರೇಣುಕಾ ಮೇಡಮ್)

೭. ನಾಲ್ಕು ಬೀದಿ ನಾಟಕಗಳಲ್ಲಿ. (೧.ಹುಲಿಗೆಮ್ಮ. ೨.ಎಲೆಮರೆ ಹೂಗಳು. ೩.ಹನುಮನಾಯಕ ೪. ಸಾಲದ ಹೆಣ)

೮. ಐದು ಬೀದಿ ನಾಟಕಗಳಲ್ಲಿ: (೧. ಜೀವಜಲ೨. ಕಾಯಕ ಜೀವಿಗಳು೩.ಮಹಿಳಾ ವಿಮೋಚನೆ. ೪. ಸಿದ್ಧಾರ್ಥ. ೫. ಬೆಳಕಿನೆಡೆಗೆ.)

ಎಂಬ ನಾಟಕಗಳನ್ನು ರಚಿಸಿದ್ದಾರೆ. ಇವರೊಬ್ಬರು ಕನ್ನಡ ಸಾಹಿತ್ಯ ಲೋಕದ ಅಪರೂಪದ ಬರಹಗಾರರಾಗಿ ಆಕರ್ಷಿಸಿದ್ದಾರೆ. ಹೀಗಾಗಿ ಇವರ ನಾಟಕಗಳ ಕುರಿತು ಅಧ್ಯಯನ ಕೈಗೊಳ್ಳುವ

ಅಗತ್ಯವಿದೆ ಎಂದು ಭಾವಿಸಲಾಗಿದೆ. ಡಾ. ಬಸವರಾಜ ಸಬರದರು ನಾಟಕ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡಿದ್ದು, ಅವರ ಪ್ರಥಮ ನಾಟಕ "ಪ್ರತಿರೂಪ"ದಿಂದ ಪ್ರಾರಂಭಿಸಿತು. ಇಂತಹ ಅದ್ಭುತ ಕವಿಯ ನಾಟಕಗಳನ್ನು ಕುರಿತು ಬೆಳಕು ಚೆಲ್ಲುವುದು ಯೋಗ್ಯವೆಂಬ ಭಾವನೆಯಿಂದ ಈ ಪ್ರಬಂಧ ರಚನೆಗೆ ಕೈಗೊಳ್ಳಲಾಗಿದೆ. ಒಬ್ಬ ವ್ಯಕ್ತಿಯ ಬರಹದಷ್ಟೇ ಬದುಕು ಕೂಡಾ ಮಹತ್ವದ್ದಾಗಿದೆ. ಅವರ ನಾಟಕಗಳ ಸಾಧನೆ ಉತ್ತುಂಗ ಶಿಖರಕ್ಕೆ ಏರಿದೆ. ಅವರ ಸಾಧನೆಯ ಪ್ರತಿ ಮೆಟ್ಟಲು ಸಹ ಮುಖ್ಯವಾಗಿದೆ. ಈ ಹಿನ್ನಲೆಯಲ್ಲಿ ಡಾ. ಬಸವರಾಜ ಸಬರದರ ಜೀವನದ ಹಂತ ಹಂತದ ವಿವರಗಳು, ಮಾಹಿತಿಗಳು ಸಂಗ್ರಹಿಸಿಸಲಾಗಿದೆ.

ಇಂತಹ ವ್ಯಕ್ತಿಯ ಕುರಿತು ಮಾಡಿದ ಸಂಶೋಧನೆ ಅರ್ಥಪೂರ್ಣವಾಗುತ್ತದೆ. ಯಾವುದೇ ಒಬ್ಬ ವ್ಯಕ್ತಿಯ ಬದುಕು ಮತ್ತು ಸಾಹಿತ್ಯ ಒಂದೇ ನಾಣ್ಯದ ಎರಡು ಮುಖಗಳಿದ್ದ ಹಾಗೆ. ಅವರ ನಾಟಕ ಕ್ಷೇತ್ರ ಬರೆಯುವುದು ತುಂಬಾ ಪ್ರಸ್ತುತ ಮತ್ತು ಮಹತ್ವದ್ದಾಗಿದೆ. ಅವರ ನಾಟಕಗಳು ಹತ್ತು ಹಲವು ದೃಷ್ಟಿಕೋನಗಳಿಂದ ಅಧ್ಯಯನಕ್ಕೊಳಪಡಿಸಿ, ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಲಾಗಿದೆ. ಅವರ ನಾಟಕ ಕ್ಷೇತ್ರದ ಸಾಧನೆ ತುಂಬಾ ಶ್ಲಾಘನೀಯವಾದುದು.

ಇತ್ತೀಚಿನ ದಿನಗಳಲ್ಲಿ ಬಂಡಾಯ ಮನೋಭಾವನೆ ಹೊಂದಿದ್ದ ಡಾ. ಬಸವರಾಜ ಸಬರದರು, ಸಾಹಿತ್ಯದ ಹಲವಾರು ಕ್ಷೇತ್ರಗಳಲ್ಲಿ ಕೃಷಿ ಮಾಡಿದ್ದಾರೆ. ಈಗಾಗಲೇ ಹನ್ನೊಂದು ಕಾವ್ಯಗಳು, ನಾಲ್ಕು ವಿಚಾರ ಸಾಹಿತ್ಯ, ಹನ್ನೆರಡು ಸಾಹಿತ್ಯ ವಿಮರ್ಶೆ, ಐದು ಸಂಶೋಧನೆ ಕೃತಿಗಳು, ಎಂಟು ನಾಟಕ ಕೃತಿಗಳು ಹೀಗೆ ಅನೇಕ ಗ್ರಂಥಗಳನ್ನು ಪ್ರಕಟಿಸಿ ಸಾಧನೆ ಮಾಡಿದ್ದಾರೆ. ಇವರ ಎಲ್ಲಾ ಸಾಹಿತ್ಯ ಕ್ಷೇತ್ರ ಸಂಶೋಧನೆಗೆ ಯೋಗ್ಯವಾಗಿದ್ದರೂ ನಾನು ಅವರ ನಾಟಕಗಳ ಅಧ್ಯಯನ ಎಂಬ ವಿಷಯದ ಮೇಲೆ ಸಂಶೋಧನೆ ಮಾಡುತ್ತಿದ್ದೇನೆ. ಅವರ ನಾಟಕಗಳು ಪ್ರಸ್ತುತ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಗು ಚೆಲ್ಲುವ ರೀತಿ ಮತ್ತು ಸಾಮಾಜಿಕವಾಗಿ ಇಲ್ಲಿರುವ ವ್ಯವಸ್ಥೆ, ಗ್ರಾಮೀಣ ಜನರ ಬದುಕು, ಮೂಢನಂಬಿಕೆ, ಅಂದಾಚಾರ, ಸ್ತ್ರೀಯರನ್ನು ನಡೆಸಿಕೊಳ್ಳುವ ರೀತಿ, ಧಾರ್ಮಿಕ ವಿಚಾರಗಳು, ಶಿಕ್ಷಣ ಪದ್ಧತಿ ಮತ್ತು ರಾಜಕೀಯದಲ್ಲಿ ನಡೆಯುತ್ತಿರುವ ವ್ಯವಸ್ಥೆಯನ್ನು ಕುರಿತು ರೈತರ ಸಮಸ್ಯೆಗಳು, ನಿರುದ್ಯೋಗ ಸಮಸ್ಯೆ, ಶರಣರ ಜೀವನದ ಮೌಲ್ಯಗಳನ್ನು ಕುರಿತು ಅವರ ಸಮಗ್ರವಾದ ನಾಟಕಗಳು ಈ ಚಿತ್ರಣವನ್ನು ಒಳಗೊಂಡಿವೆ.

ನನಗೆ ಮೊದಲಿನಿಂದಲೂ ನಾಟಕ ಸಾಹಿತ್ಯದ ಮೇಲೆ ಹೆಚ್ಚು ಒಲವು, ಆ ಕಾರಣದಿಂದ ನಾಟಕದ ಬಗ್ಗೆ ಅಭ್ಯಾಸ ಮಾಡುವ ಇಚ್ಛೆಯನ್ನು ಮೂಡಿದಾಗ ನನ್ನ ಮಾರ್ಗದರ್ಶಕರ ಮುಂದೆ ನನ್ನ ಮನಸ್ಸಿನ ಭಾವನೆಯನ್ನು ಇಟ್ಟಾಗ ಅವರು ಅದನ್ನು ಕೇಳಿ, ಅದಕ್ಕೆ ಮನ್ನಿಸಿ, ನನಗೆ 'ಡಾ. ಬಸವರಾಜ ಸಬರದ ನಾಟಕ'ಗಳು ಎಂಬ ವಿಷಯವನ್ನು ಆಯ್ಕೆಗೆ ಅನುಮತಿ ನೀಡಿದರಿಂದ ಈ ಅಧ್ಯಯನವನ್ನು ಆಯ್ಕೆ ಮಾಡಿಕೊಂಡೆ. ನಾಟಕ ಸಾಹಿತ್ಯ ಅಧ್ಯಯನದ ಉದ್ದೇಶ ನಾಟಕ ಇಂದಿನ ಸ್ಥಿತಿಯಲ್ಲಿ ಅಳಿದು ಹೋಗುವ ಅಂಚಿನಲ್ಲಿವೆ. ನಾಟಕಗಳು ಒಂದು ಸಂದರ್ಭದಲ್ಲಿ ಮನುಷ್ಯನ ಬದುಕಿನ ದಿಕ್ಕನ್ನೇ ಬದಲಿಸುವ ಸ್ಥಿತಿಯಲ್ಲಿದ್ದವು. ಜನ ನಾಟಕವನ್ನು ಬಯಸುತ್ತಿದ್ದರು. ಸಾಮಾನ್ಯವಾಗಿ ಜನ ಸ್ಪಂದಿಸುವ ಕಲೆ ನಾಟಕವಾಗಿತ್ತು. ಆದರೆ ಇಂದಿನ ಆಧುನಿಕವಾದ ದೃಷ್ಯ ಮಾದ್ಯಮಗಳಿಂದ ನಾಟಕದ ಸ್ಥಾನ ತುಂಬ ಚಿಂತಾಜನಕವಾಗಿದೆ. ಇಂತಹ ಸ್ಥಿತಿಯಲ್ಲಿ ನಾಟಕಗಳ ಪುನರ್ ಜೀವನದ ಉದ್ದೇಶದಿಂದ ಆಧುನಿಕ ನಾಟಕಕಾರರು ಒಳ್ಳೆಯ ರೀತಿಯಿಂದ ಕೃಷಿ ಮಾಡುತ್ತಿದ್ದಾರೆ. ಅಂತಹವರಲ್ಲಿ 'ಡಾ. ಬಸವರಾಜ ಸಬರದರು' ಒಬ್ಬರಾಗಿದ್ದಾರೆ. ಅವರ ನಾಟಕಗಳ ಅಧ್ಯಯನದ ಉದ್ದೇಶ ಇಂದಿನ ಸಮಾಜದಲ್ಲಿನ ಪರಿಸ್ಥಿತಿಯನ್ನು ಬಂಡಾಯ ಮನೋಭಾವನೆಯಿಂದ ವಿರೋಧಿಸುತ್ತಿರುವಂತಹದ್ದು. ಅವರ ಹೋರಾಟದ ಮನೋಭಾವನೆಗೆ ಹಿಡಿದ ಕನ್ನಡಿಯಂತಿದೆ. ಅವರ ಗುರಿ 'ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು' ಎಂಬ ಸಿದ್ಧಾಂತವನ್ನು ಒಳಗೊಂಡಿದೆ.

ನನ್ನ ಎಂ.ಫಿಲ್. ಅಧ್ಯಯನಕ್ಕೆ ಅವರ ನಾಟಕಗಳನ್ನು ಕುರಿತು ಮಾತ್ರ ಆಯ್ಕೆ ಮಾಡಿಕೊಂಡು, ನನ್ನ ಅರಿವಿನ ಮತ್ತು ಪುಟದ ಮೀತಿಯ ಅನುಗುಣವಾಗಿ ನಾನು ನನ್ನ ಗ್ರಂಥವನ್ನು ಸೀಮಿತ ಅಧ್ಯಾಯಕ್ಕೆ ಒಳಪಡಿಸಿದ್ದೇನೆ.

# ಅಧ್ಯಾಯ-೨

# ಡಾ. ಬಸವರಾಜ ಸಬರದರ ನಾಟಕಗಳ ಅಧ್ಯಯನ

**ನಾಟಕ ಸಾಹಿತ್ಯ ಪರಂಪರೆ:**

ನಾಟಕ ಸಾಹಿತ್ಯ ಪರಂಪರೆಯು ಭಾರತದಲ್ಲಿ ಕ್ರಿ.ಪೂ. ಶತಮಾನದಿಂದ ಇಂದಿನವರೆಗೆ ಬೆಳೆದುಕೊಂಡು ಬಂದಿದೆ. ಸಂಸ್ಕೃತ ನಾಟಕಕ್ಕೆ ಶ್ರೇಷ್ಠವಾದಂತಹ ಸ್ಥಾನವನ್ನು ನೀಡಿದೆ. ಮುಂದೆ ಕರ್ನಾಟಕದ ಮಟ್ಟಿಗೆ ಹೇಳಬೇಕಾದರೆ ಕ್ರಿ.ಶ. ೮ ನೇ ಶತಮಾನದ ಮೊಟ್ಟ ಮೊದಲ ಗ್ರಂಥವಾದ ಕವಿರಾಜ ಮಾರ್ಗದಲ್ಲಿ ಪ್ರಾಚೀನ ರೂಪಗಳಾದ ಗದ್ದೆ ಕಥೆ, ಬೆದ್ದಂಡೆ, ಚಿತ್ತಾಣ, ಪಗರಣವೆಂಬ ರೂಪಗಳನ್ನು ಹೇಳಿದ್ದಾರೆ. 'ಪಗರಣವೆಂಬ ಶಬ್ದ ನಾಟಕಕ್ಕೆ ಸಂಬಂಧಿಸಿದೆ[೧] ಎಂಬುವುದು ಕಂಡು ಬರುತ್ತದೆ. ಮುಂದೆ ವಡ್ಡಾರಾಧನೆಯಲ್ಲಿ ಅನೇಕ ಕಥೆಗಳು ನಾಟಕೀಯ ಅಂಶಗಳನ್ನು ಹೊಂದಿವೆ ಎಂಬುವುದು ತಿಳಿಯುತ್ತದೆ. ೧೦ ನೇ ಶತಮಾನದ ಪಂಪನ ಕಾವ್ಯಗಳಾದ ವಿಕ್ರಮಾರ್ಜುನ ವಿಜಯದಲ್ಲಿ ನಾಟಕೀಯವಾದ ಅಂಶ ಕಂಡು ಬರುತ್ತವೆ. ಅದೇ ತರಹ ರನ್ನನ ಕಾವ್ಯವಾದ ಗದಾಯುದ್ಧದಲ್ಲಿಯೂ ನಾಟಕೀಯವಾದ ಅಂಶಗಳು ಕಂಡು ಬರುತ್ತವೆ.

೧೨ ನೇ ಶತಮಾನದ ಶಿವಶರಣರಾದ ಬಹುರೂಪಿ ಚೌಡಯ್ಯನ ವೃತ್ತಿ ನಾಟ್ಯಮಯವಾಗಿತ್ತು ಎಂಬುವುದು ಅವನ ವಚನಗಳಿಂದ ಕಂಡು ಬರುತ್ತವೆ. ಕ್ರಿ.ಶ. ೧೬೮೦ ರಲ್ಲಿ ಕನ್ನಡ ಸಾಹಿತ್ಯದ ಮಧ್ಯಯುಗ ಎಂದು ಗುರುತಿಸಿದಾಗ ಅದರಲ್ಲಿಯೂ ಚಿಕ್ಕದೇವರಾಜ ಒಡೆಯರ ಆಸ್ಥಾನದ ಸಿಂಗರಾರ್ಯನಿಂದ ರಚಿತವಾದ ಮಿತ್ರವಿಂದ ಗೋವಿಂದ ಎಂಬ ನಾಟಕ ಕನ್ನಡದಲ್ಲೇ ಮೊಟ್ಟ ಮೊದಲನೇ ನಾಟಕವಾಗಿದೆ. ಮುಂದೆ ೧೯ ನೇ ಶತಮಾನದಲ್ಲಿ ಮೈಸೂರಿನ ಒಡೆಯರ ಆಳ್ವಿಕೆಯಲ್ಲಿ ಬಸಪ್ಪ ಶಾಸ್ತ್ರಿಗಳ ಅನೇಕ ನಾಟಕಗಳನ್ನು ಬರೆದು ರಂಗದ ಮೇಲೆ ಮಾಡಿದಂತದ್ದು ಕಂಡು ಬರುತ್ತದೆ. ಆಧುನಿಕ ಸಾಹಿತ್ಯದ ಪ್ರಕಾರವಾದ ನವೋದಯದಲ್ಲಿ ಇಂಗ್ಲೀಷನಿಂದ ಅನೇಕ ನಾಟಕಗಳು ಕನ್ನಡಕ್ಕೆ ರೂಪಾಂತರವಾದದ್ದು ಕಂಡು ಬರುತ್ತದೆ.

---

೧. ಸಂಕ್ಷಿಪ್ತ ಕನ್ನಡ ನಿಘಂಟು ಕನ್ನಡ ಸಾಹಿತ್ಯ ಪರಿಷತ್ ೨೦೦೧, ಪುಟ ೨೦೫.

ಬಿ.ಎಂ. ಶ್ರೀ, ಕುವೆಂಪು, ಶ್ರೀನಿವಾಸ, ಬೇಂದ್ರೆ, ಕೈಲಾಸಂ, ಶ್ರೀರಂಗ, ಪು.ತಿ.ನ. ಮುಂತಾದವರು ನಾಟಕ ಕೃತಿಗಳನ್ನು ರಚಿಸಿದರು. ನವ್ಯ ಘಟ್ಟಕ್ಕೆ ಬಂದಾಗ ಲಂಕೇಶ, ಚಂದ್ರಶೇಖರ ಕಂಬಾರ, ಚಂದ್ರಶೇಖರ ಪಾಟೀಲ, ಸೀಮಾ ಹಿರೇಮಠ ಮುಂತಾದವರು ನಾಟಕಕಾರರಾಗಿದ್ದಾರೆ.

ಬಂಡಾಯ ಘಟ್ಟಕ್ಕೆ ಬಂದಾಗ ಸತ್ಯಾನಂದ ಪಾತ್ರೋಟ, ಎಚ್.ಎಸ್. ಶಿವಪ್ರಕಾಶ, ಕೆ.ಎಸ್. ಭಗವಾನ, ಅರವಿಂದ ಮಾಲತಿ, ಚಂದ್ರಕಾಂತ ಕುಶನೂರ ಪ್ರಮುಖ ನಾಟಕಕಾರರಾಗಿದ್ದಾರೆ. ಇಂತಹ ಒಂದು ಶ್ರೀಮಂತ ಪರಂಪರೆಯುಳ್ಳ ನಾಟಕಗಳು ಕನ್ನಡ ಸಾಹಿತ್ಯದಲ್ಲಿ ಕಂಡುಬರುತ್ತವೆ.

### ನಾಟಕಗಳ ಅಧ್ಯಯನಃ

ಡಾ. ಬಸವರಾಜ ಸಬರದರು ಈಗಾಗಲೇ ೧೭ ನಾಟಕಗಳನ್ನು ರಚಿಸಿದ್ದಾರೆ. ಪ್ರತಿಯೊಂದು ನಾಟಕದಲ್ಲಿ ಸಮಾಜದ ಪ್ರಸ್ತುತ ಸಮಸ್ಯೆಗಳು ಮತ್ತು ಆ ಸಮಸ್ಯೆಗಳಿಗೆ ಹೇಗೆ ಪರಿಹಾರ ಎಂಬ ಇತ್ಯಾದಿ ವಿಚಾರಗಳನ್ನು ಒಳಗೊಂಡಂತಹ ಮನೋಭಾವನೆ ಅವರ ನಾಟಕಗಳಲ್ಲಿ ಕಂಡು ಬರುತ್ತವೆ. ಅವರ ಪ್ರಥಮ ನಾಟಕವಾದ ಪ್ರತಿರೂಪ ಅಸಂಗತ ನಾಟಕದ ಅಂಶಗಳನ್ನು ಒಳಗೊಂಡಿದೆ. ಅವರ ಎರಡನೆ ನಾಟಕ ರೆಕ್ಕೆ ಮೂಡಿದಾಗ ನಾಟಕದಲ್ಲಿ ಕವಿವಸ್ತುವನ್ನು ಕಥೆಯಿಂದ ಆರಿಸಿಕೊಂಡು, ಆಧುನಿಕ ಜಗತ್ತಿನ ರಾಜಕೀಯ ಸಮಸ್ಯೆಗಳು ಮತ್ತು ಇಂದಿನ ಸ್ತ್ರೀಯರ ನಿಜವಾದ ಸಮಸ್ಯೆಯದ ಕಡೆಗೆ ಗಮನ ಹರಿಸಿದ್ದಾರೆ. ಅವರ ಮೂರನೇ ನಾಟಕ ಬೆಳ್ಳಿ, ಇದರಲ್ಲಿ ನಾಡಿನ ಪ್ರಚಲಿತವಿರುವ ದೇವದಾಸಿ ಪದ್ಧತಿಯ ನಿರ್ಮೂಲನೆಯಾಗಬೇಕೆಂಬ ಸಂದೇಶವನ್ನು ನೀಡಿದ್ದಾರೆ. ಅವರ ನರಬಲಿ ನಾಟಕದಲ್ಲಿ ಸಮಾಜದಲ್ಲಿರುವಂತಹ ಕೆಳಸ್ಥರದ ಜನರ ಭಾವನೆಯನ್ನು ಸಮರ್ಥವಾಗಿ ಹೋರಹಾಕುವ ಬಂಡಾಯದ ಮನೋಭಾವನೆ ಹೊಂದಿದೆ. ಅವರ ಬೆಳ್ಳಕ್ಕಿ ಸಾಲು ನಾಟಕವು ಇದರಲ್ಲಿ ಪ್ರೀತಿಸುವ ಜೀವಿಗಳ ನಿಜವಾದಂತಹ ಪ್ರೇಮದ ಪ್ರತೀಕವಾದ ವಿಚಾರಗಳನ್ನು ಕಂಡು ಬರುತ್ತದೆ. ಅವರ ಮೂರು ಬೀದಿ ನಾಟಕಗಳಲ್ಲಿ ಕವಿ ಇಂದಿನ ಸಮಾಜದಲ್ಲಿ ಘಟಿಸುವಂತಹ ವಿವಿಧ ಬಗೆಯ ಶೋಷಣೆ, ಮೂಢನಂಬಿಕೆ, ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುತ್ತಿರುವ ರಾಜಕೀಯ ಭ್ರಷ್ಟಾಚಾರ ಇತ್ಯಾದಿ ಘಟನೆಗಳ ಮೇಲೆ ಬೆಳಕು ಚೆಲ್ಲುವ ಮೂಲಕ ಜನಜಾಗೃತಿ ಮಾಡುತ್ತದೆ. ಇವರ ಕೊನೆಯ ನಾಟಕ ಐದು ಬೀದಿ ನಾಟಕಗಳು. ಈ ನಾಟಕದಲ್ಲಿ ಸಾಹಿತ್ಯದ ಎಲ್ಲಾ

ಪ್ರಕಾರಗಳಲ್ಲಿ ಕೈ ಆಡಿಸಿದ ಇವರ ನಾಟಕಗಳಲ್ಲಿ ಪ್ರಕೃತಿಯ ಮತ್ತು ನೈಸರ್ಗಿಕ ಸಂಬಂಧಪಟ್ಟಂತೆ ಅಂತರ್ಜಲ ಇಳಿಮುಖವಾದದ್ದು, ಕಾಯಕ ಜೀವಿಗಳು, ಮಹಿಳಾ ಸಂಘಟನೆಗಳು, ಮಹಿಳಾ ವಿಮೋಚನೆ, ಸ್ತ್ರೀಪರವಾದ ವಿಚಾರಗಳನ್ನು ಒಳಗೊಂಡಿವೆ. ಇವರ ನಾಟಕಗಳಲ್ಲಿ ಶರಣರ ಬದುಕು, ಬುದ್ಧನ ಜೀವನದ ಜ್ಞಾನೋದಯದ ಘಟ್ಟ, ರೈತರ ಸಮಸ್ಯೆಗಳು, ಶಿಕ್ಷಣ ನೀತಿ, ನಿರುದ್ಯೋಗದ ಸಮಸ್ಯೆಗಳು ಒಳಗೊಂಡಿವೆ.

**ಅಸಂಗತ ನಾಟಕ (ಪ್ರತಿರೂಪ):**

ಡಾ. ಬಸವರಾಜ ಸಬರದರ ಪ್ರತಿರೂಪ ನಾಟಕವು ಅಸಂಗತ ಶೈಲಿಯ ನಾಟಕಕ್ಕೆ ಸಂಬಂಧಿಸಿದಂತ ವಿಚಾರಗಳು ಒಳಗೊಂಡಿದೆ. ಅಸಂಗತವೆಂದರೆ ನಾಟಕದ ಪ್ರಮುಖ ವ್ಯಕ್ತಿಯ ಪ್ರತಿರೂಪಗಳಾಗಿ ಆ ವ್ಯಕ್ತಿಯ ವಿಚಾರಗಳು ಮಾತಾಡುವಂತದ್ದು, ಮಾರ್ಗದರ್ಶನವಾಗುವಂತದ್ದು ಕಂಡು ಬರುತ್ತದೆ. ಮನುಷ್ಯನ ಜೀವನದ ಆತ್ಮಾವಲೋಕನದ ವಿಚಾರವು ಬಹಳ ಪ್ರಮುಖವಾಗಿ ಕಂಡು ಬಂದಿವೆ. ಕನ್ನಡದಲ್ಲಿ ಇತ್ತೀಚಿನ ವರ್ಷಗಳಲ್ಲಿ ಅಸಂಗತ ಪ್ರಾಯೋಗಿಕ ರೂಪದಲ್ಲಿ ಬಂದ ನಾಟಕಗಳಲ್ಲಿ ಇದು ಒಂದು. ಇಲ್ಲಿ ನಾಲ್ಕು ಪಾತ್ರಗಳ ಮೂಲಕ ಆಧುನಿಕ, ಸಾಮಾಜಿಕ, ಜೀವನದ ಗೊಂದಲಮಯ, ಪರಿಸರವನ್ನು ಚಿತ್ರಿಸುವ ಪ್ರಯತ್ನವಾಗಿದೆ. ಲೇಖಕರು ಇಲ್ಲಿ ಬಳಸಿರುವ ಗ್ರಾಮೀಣ ಪರಿಸರದ ಪದಗಳು, ಗಾದೆ ಮಾತುಗಳು, ಒಳ್ಳೆಯ ರೀತಿಯಿಂದ ಸಂದರ್ಭಕ್ಕೆ ತಕ್ಕಂತೆ ಇವೆ.

'ಈ ನಾಟಕದಲ್ಲಿ ವ್ಯಕ್ತಿ ಸಮಾಜವನ್ನು ಜನರನ್ನು ಪ್ರತಿನಿಧಿಸುವಂತಹ ಸಮಾಜ ಸೇವೆ ಮಾಡುವಂತಹ ಕಾರ್ಯದಲ್ಲಿ ತೊಡಗಿಸಿಕೊಳ್ಳಬೇಕಾದವನು ತನ್ನ ಸ್ವಾರ್ಥ ಬುದ್ದಿಯ ಬಲೆಗೆ ಬಿದ್ದು, ಸಮಾಜವನ್ನೇ ಮರೆತು ವೈಯಕ್ತಿಕ ಸುಖ, ಸಂಪಾದನೆಗೆ ಇಳಿಯುವಂತದ್ದು, ಸ್ವಾರ್ಥಕ್ಕೀಳಿದಂತಹ ವ್ಯಕ್ತಿ ಸಮಾಜವನ್ನು ಹೇಗೆ ಕಡೆಗಣಿಸುತ್ತಾನೆ ಎಂಬುವುದು ನಾಟಕದಲ್ಲಿ ಉತ್ತಮವಾಗಿ ಮೂಡಿಬಂದಿದೆ. ಇದರಲ್ಲಿ ಗ್ರಾಮೀಣ ಪರಿಸರದತ್ತ ತಮ್ಮ ದೃಷ್ಟಿಯನ್ನು ಮೂಡಿಸಿದ ನಿಖರವಾದ ಹೋರಾಟ, ಸತ್ಯ ಸಂವೇದನೆಯೊಂದಿಗೆ ಈ ನಾಟಕ ರಚನೆಯನ್ನು ಮಾಡಿರುವಂತದ್ದು ಕಂಡು ಬರುತ್ತದೆ. ನೂತನವಾದ ಮೌಲ್ಯಕ್ಕೆ ಪ್ರಾಮುಖ್ಯತೆ ನೀಡಿ, ಆಡು ಮಾತಿನ ಮರ್ಮವನ್ನು ತಿಳಿದು ವಿಡಂಬನೆಯತ್ತ ಹೊಸ ಹೊದಿಕೆ ಹೊದಿಸಿ, ಸಮಕಾಲಿನ ಅನುಭವಗಳನ್ನು ಅನೇಕ ವ್ಯಕ್ತಿಗಳತ್ತ ಕಂಡರೂ ಆ "ಕ, ಕಾ, ಕಿ" ಗಳನ್ನು ಒಂದು ಮಾಡಿದ ಬಗೆ ಮಹತ್ವದಾದದ್ದು. ವ್ಯಕ್ತಿತ್ವವು

ಇವರಿಗಿದ್ದರೂ ಕ್ರಿಯೆಯ ಕೋಶಗಳನ್ನು ಒಡೆದ ಈ ಹೊಸ ನಾಟಕ ತಂತ್ರ ಬಳಕೆ ತಂತ್ರಗಾರಿಕೆಯಿಂದ ಕೂಡಿದೆ[೨].

ಈ ನಾಟಕದಲ್ಲಿ ವ್ಯಕ್ತಿಯ ಪಾತ್ರದ ಪ್ರತಿರೂಪಗಳಾದ "ಕ, ಕಾ, ಕಿ"ಗಳು ವ್ಯಕ್ತಿಯ ಇನ್ನೊಂದು ಮುಖದಂತೆ ಕೆಲಸ ಮಾಡುತ್ತವೆ. ವ್ಯಕ್ತಿಯನ್ನುವ ಪಾತ್ರ ತಾನು ಸಮಾಜದಲ್ಲಿ ಒಳ್ಳೆಯ ಮನುಷ್ಯನೆಂದು ಸಮರ್ಥಿಸಿಕೊಳ್ಳಲು ಮುಂದಾದಾಗ ಅವನ ಪ್ರತಿರೂಪಗಳು ಅವನ ಅವಗುಣಗಳನ್ನು ಅವನಿಗೆ ತಿಳಿಸುತ್ತವೆ. ಅವನ ಮಾಡಿದ ಎಲ್ಲಾ ತಪ್ಪುಗಳು ಅವು ಬಯಲಿಗೆಳೆಯುತ್ತವೆ. ಇದರಿಂದ ಗಾಬರಿಗೊಂಡ ವ್ಯಕ್ತಿ ಅವಕ್ಕೆ ಉತ್ತರ ನೀಡಲು ಅಸಮರ್ಥನಾಗುತ್ತಾನೆ. ರಾಜಕೀಯ ವ್ಯಕ್ತಿಯಾದ್ದರಿಂದ ಅವನಿಗೆ ಭಾಷಣ, ಅನಿವಾರ್ಯತೆಯನ್ನು ಕಂಡು ಬರುತ್ತದೆ. ಅವನು ಭಾಷಣ ಮಾಡಲು ಪ್ರಾರಂಭಿಸಿದರೆ ಅವನ ಪ್ರತಿರೂಪಗಳು ಅಡ್ಡಿಯಾಗಿ ಬಂದು, ಅವನ ಇನ್ನೊಂದು ಮುಖವನ್ನು ತೋರಿಸುತ್ತದೆ. ಮನುಷ್ಯನು ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡರೆ ಅವನು ಅತೀಕೀಳಾಗಿ ಕಂಡು ಬರುತ್ತಾನೆ. ಅನೇಕ ಪ್ರಾಣಿ, ಪಕ್ಷಿ, ಆಹಾರ ಧಾನ್ಯ, ಹಣ್ಣು ಹಂಪಲ, ತರಕಾರಿಗಳಿಗಿಂತಲೂ ಕೆಳಮಟ್ಟದಲ್ಲಿ ಇಳಿಯುತ್ತಾನೆ. ಅವನ ಪ್ರತಿರೂಪ ಪಾತ್ರಗಳಾದ "ಕ, ಕಾ, ಕಿ"ಗಳು ಅನೇಕ ಪ್ರಾಣಿಗಳ ನಿಸ್ವಾರ್ಥ ಸೇವೆ ಪ್ರಯೋಜನಿಕವಾದ ಬದುಕು ಬದುಕುತ್ತವೆ ಎಂಬುವುದು ತಮ್ಮ ಧಾಟಿಯಲ್ಲಿ ವ್ಯಕ್ತಿ ಪಾತ್ರಕ್ಕೆ ತಿಳಿಸುತ್ತವೆ. ಮನುಷ್ಯನಾದಂತಹವನು ಆ ಪ್ರಾಣಿ ಪಕ್ಷಿಗಳಿಗಿಂತಲೂ ತಾನು ಕಡಿಮೆ ಅನ್ನುವ ಭಾವನೆ ಮೂಡಿಸುತ್ತವೆ.

ಈ ನಾಟಕದಲ್ಲಿ ವ್ಯಕ್ತಿ ಪಾತ್ರವು ಮಾಡಿದ ಎಲ್ಲಾ ತಪ್ಪುಗಳು ಬಯಲಿಗೆ ತಂದಾಗ ಅದಕ್ಕೆ ಒಪ್ಪಿಕೊಳ್ಳುವಂತದ್ದು, ಅದಕ್ಕೆ ಪಶ್ಚತಾಪ ಪಡುವದಾಗಿ ಹೇಳುವುದು. ಅದಕ್ಕೆ ಅವನ ಪ್ರತಿರೂಪ ಪಾತ್ರಗಳು ಸಹಮತ ನೀಡುವುದು. ಈ ನಾಟಕ ಪ್ರೇಕ್ಷಕರಿಗೆ, ಓದುಗರಿಗೆ ತನ್ನದೇ ಸಂದೇಶವನ್ನು ನೀಡಬಯಸುತ್ತದೆ. ಮನುಷ್ಯನಾದವನು ಮೊದಲು ಮಾನವೀಯ ಗುಣಗಳನ್ನು ಹೊಂದಬೇಕು. ಮನುಷ್ಯತ್ವವನ್ನು ಬೆಳೆಸಿಕೊಳ್ಳಬೇಕು. ಅದೇ ನಿಜವಾದ ಜೀವನ, ಅಧಿಕಾರ ಅಂತಸ್ತು ಬಂದಾಗ ಅದು ಯಾವ ರೀತಿಯಿಂದ ಬಳಸಿಕೊಳ್ಳಬೇಕು ಎಂಬ ವಿಚಾರಗಳು ಈ ನಾಟಕದ ಮುಖಾಂತರ ತಿಳಿಯುತ್ತದೆ.

---

೨. ಪುಸ್ತಕ ಅವಲೋಕನ, ಶಾಸನ ದಿನಪತ್ರಿಕೆ, ಗುಲಬರ್ಗಾ, ದಿಃ ೧-೧-೧೯೭೮.

ನಾಟಕದ ಕೊನೆಯಲ್ಲಿ ವ್ಯಕ್ತಿ ತನ್ನ ತಪ್ಪಿನ ಅರಿವಾಗಿ ಪಶ್ಚತಾಪ ಪಟ್ಟು, ನಾನು ಮನುಷ್ಯನೇ ಅಲ್ಲವೆಂದು ಒಪ್ಪಿಕೊಳ್ಳುವಂತೆ ಮಾಡುವುದು, ನೋಡಿದಾಗ ಈ ನಾಟಕ ಹೇಗೆ ಮನುಷ್ಯನನ್ನು ಪರಿವರ್ತನೆಗೆ ಕಾರಣವಾಗಬಲ್ಲದು ಎಂಬುವುದು ತಿಳಿದು ಬರುತ್ತದೆ.

'ಪ್ರತಿರೂಪ ನಾಟಕ ತನ್ನಲ್ಲಿ ಇಲ್ಲದನ್ನು ಆರೋಪಿಸಿಕೊಳ್ಳುವ ಗೊಂದಲದಲ್ಲಿ ಕ್ರಮೇಣ ತಾನು ಸಮಾಜದ ಮುಂದೆ ಬತ್ತಲೆಯಾಗುತ್ತ ಹೋಗುತ್ತಾನೆ. ಅವನು ಎಷ್ಟು ಹೀನ, ಎಷ್ಟು ಚಿಲ್ಲರೆ ಇದ್ದಾನೆಂದು ತಿಳಿದುಕೊಳ್ಳುತ್ತಾನೆ. ಏಕಾಂತದಲ್ಲಿ ಕುಳಿತು ಆತ್ಮ ಶೋಧನೆ ಮಾಡುವಾಗ ವ್ಯಕ್ತಿತ್ವದ ಪದರಗಳು ಬಿಚ್ಚುತ್ತವೆ. ಕೊಳ್ಳು ದೊಡ್ಡಸ್ತಿಕೆಯ ಆವರಣದಲ್ಲಿ ಮರೆಯುವ ವ್ಯಕ್ತಿ ಕೊನೆಗೆ ಸೊನ್ನೆನಾಗಿ ಬಿಡುತ್ತಾನೆ ನಿರರ್ಥಕನಾಗುತ್ತಾನೆ. ಕ, ಕಾ, ಕಿ. ಈ ಹೆಸರಿಲ್ಲದ ಮೂರು ಜನ ವ್ಯಕ್ತಿಯ ಪ್ರತಿರೂಪವಾಗಿದ್ದಾರೆ. ವ್ಯಕ್ತಿಯಿಂದ ಬೇರ್ಪಟ್ಟ ವ್ಯಕ್ತಿತ್ವ ಇವರಿಗಿಲ್ಲ. ಇವರು ಹೇಳುವ ಸಂವಾದ, ಇವರು ಮಾಡುವ ಕ್ರಿಯೆ, ಮತ್ತು ಇವರು ಉದ್ಘಾಟಿಸುವ ಸತ್ಯ ಇನ್ನ್ಯಾರದು ಇರದೇ ಆ ವ್ಯಕ್ತಿಯದ್ದೇ ಆಗಿರುತ್ತದೆ [೩].

**ಪ್ರತಿರೂಪ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖವಾಗಿ ನಾಲ್ಕು ಪಾತ್ರಗಳು ಕಂಡು ಬರುತ್ತವೆ. "ವ್ಯಕ್ತಿ" ಮತ್ತು ಅವನ ಪ್ರತಿರೂಪಗಳಾದ "ಕ, ಕಾ, ಕಿ"ಗಳು ಒಂದಕ್ಕೊಂದು ಸಂಬಂಧ ಇರಲಾರದಂತಹ ವಿಚಾರಗಳನ್ನು ಮಂಡಿಸಿದರೂ ನಾಟಕದ ಪ್ರಮುಖ ಪಾತ್ರವಾದ ವ್ಯಕ್ತಿಯ ಸುತ್ತ ಮುತ್ತಲ ಆ ಪಾತ್ರಗಳು ಸುತ್ತುತ್ತವೆ. ಈ ನಾಟಕದಲ್ಲಿ ಪಾತ್ರಗಳು ಹೇಳುವಂತಹ ಮಾತುಗಳು ಆಕರ್ಷಣೀಯವಾಗಿ ಓದುಗರ, ನೋಡುಗರ ಮನಸ್ಸನ್ನು ಸೆಳೆಯುವಂತಹವು ಆಗಿವೆ.

**ಭಾಷೆಃ**

ಈ ನಾಟಕದ ಭಾಷೆ ಗ್ರಾಮೀಣ ಭಾಗದ ಭಾಷೆಯಾಗಿದ್ದು, ಓದುವರ, ನೋಡುವರ ಇಚ್ಛೆಗನುಗುಣವಾಗಿ ಭಾಷೆಯನ್ನು ಬಳಸಿದ್ದಾರೆ. ಭಾಷೆ ಬಿಗುವಿನಿಂದ ಕೂಡಿದ್ದರೂ ಆಕರ್ಷಣೀಯವಾಗಿದೆ. 'ವ್ಯಕ್ತಿ' 'ಕ, ಕಾ, ಕಿ'ಗೆ ಶರಣಾಗಿ ಅವು ಹೇಳಿದ ಹಾಗೆ ಕೇಳಲು ಸಿದ್ಧನಾಗುತ್ತಾನೆ.

---

೩. ಪ್ರತಿರೂಪ–ಬಸವರಾಜ ಸಬರದ ಪುಟ–೧ ಮುನ್ನಡಿ, ದಿಃ ೧೦–೧೧–೧೯೭೭.

## ಗೀತ ನಾಟಕ (ಬೆಳ್ಳಕ್ಕಿ ಸಾಲು)

ಹೊಸ ಕನ್ನಡ ಸಾಹಿತ್ಯದಲ್ಲಿ ಗೀತ ನಾಟಕ ಸಾಹಿತ್ಯ ಸಾಕಷ್ಟು ಸತ್ವ ಪೂರ್ಣವಾಗಿ, ವೈವಿದ್ಯ ಪೂರ್ಣವಾಗಿ ಮೂಡಿಬಂದಿದೆ. ಭಾರತದ ಸಾಹಿತ್ಯ ಲೋಕದ ಅತ್ಯುನ್ನತ ಪ್ರಶಸ್ತಿಯಾದ ಜ್ಞಾನಪೀಠ ಪ್ರಶಸ್ತಿ, ಕನ್ನಡ ನಾಟಕ ಕ್ಷೇತ್ರಕ್ಕೆ ಶ್ರೀ ಗಿರೀಶ ಕಾರ್ನಾಡರಿಗೆ ಲಭಿಸಿರುವುದು ಭಾರತೀಯ ನಾಟಕ ಕ್ಷೇತ್ರಕ್ಕೆ ಕನ್ನಡದ ಪಾಲು ಎಷ್ಟು ಮಹತ್ವ ಎಂಬುವುದನ್ನು ಎತ್ತಿ ತೋರಿಸುತ್ತದೆ. ಹೊಸಗನ್ನಡದಲ್ಲಿ ಗೀತ ನಾಟಕಗಳು ರಚನೆಗೊಂಡಿವೆಯಾದರೂ ಉಳಿದ ಪ್ರಕಾರದ ನಾಟಕಗಳಿಗೆ ಹೋಲಿಸಿದರೆ ಅವುಗಳ ಸಂಖ್ಯೆ ತೀರಾ ಕಡಿಮೆ. ಗೀತ ನಾಟಕದಲ್ಲಿ ಕಾವ್ಯಮಯ, ಶೈಲಿ ಪ್ರದಾನವಾಗಿರುತ್ತದೆ. ಅಲ್ಲಿಯ ಕೆಲವು ಗೀತೆಗಳನ್ನು ಸಂಗೀತಕ್ಕೂ ಅಳವಡಿಸಬಹುದಾಗಿದೆ. ಗೇಯಗುಣ ಪ್ರದಾನವಾಗಿರುವ ಈ ಗೀತ ನಾಟಕಗಳನ್ನು ಹೊಲುವ ಕೆಲವು ರೂಪಗಳು ಭಾರತೀಯ ಪ್ರಾಚೀನ ಸಾಹಿತ್ಯದಲ್ಲಿ ಕಾಣ ಸಿಗುತ್ತವೆ.

ಕನ್ನಡ ಸಾಹಿತ್ಯದಲ್ಲಿ ಗೀತ ನಾಟಕದ ಆದ್ಯ ಪ್ರವರ್ತಕಾರರೆಂದರೆ ಶಿವರಾಮ ಕಾರಂತರು ಸ್ವತಃ ಸಂಗೀತ ನೃತ್ಯಗಳನ್ನು ಬಲ್ಲರು. ಗೀತ ನಾಟಕಗಳ ಪರಂಪರೆಯನ್ನು ಆಧುನಿಕ ಸಂದರ್ಭದಲ್ಲಿ ಪ್ರಾರಂಭಿಸಿದರು. ಕಾರಂತರ ಗೀತ ನಾಟಕದ ಮೊದಲ ಕೃತಿ "ಮುಕ್ತ ದ್ವಾರ" ೧೯೩೦ ಪ್ರಕಟವಾಯಿತು. ಗೀತ ನಾಟಕ ಮತ್ತೊಂದು ಪ್ರಮುಖ ಹೆಸರು "ಪು.ತಿ. ನರಸಿಂಹಚಾರ್ಯ" ಅವರದು. ಅವರ 'ಅಹಲ್ಯ' ಪ್ರಸಿದ್ಧವಾದ ಗೀತ ನಾಟಕವಾಗಿದೆ. 'ಗೀತ ನಾಟಕ ರಚನಕಾರರಲ್ಲಿ ಕೆ.ವಿ. ಸುಬ್ಬಣ್ಣ, ಕೀರ್ತಿನಾಥ ಕುರ್ತಕೋಟಿ, ಅಮ್ಮೆಂಬಳ ಶಂಕರ ನಾರಾಯಣ, ಡಿ.ವಿ.ಜಿ. ಮುಂತಾದವರನ್ನು ಹೆಸರಿಸಬಹುದು. ಮಾಸ್ತಿ, ಗೋಕಾಕ, ಕುವೆಂಪು, ರಾಜರತ್ನಂ, ಎಂ.ಆರ್. ಶ್ರೀ ಮೊದಲಾದ ಲೇಖಕರು ಸರಳ ರಗಳೆಯಲ್ಲಿ ರಚಿಸಿರುವ ರೂಪಗಳಲ್ಲಿ ಗೀತ ನಾಟಕ ಛಾಯೆಯನ್ನು ಕಾಣಬಹುದಾಗಿದೆ[೪].

ಚಂದ್ರಶೇಖರ ಕಂಬಾರರ ಅನೇಕ ನಾಟಕಗಳಲ್ಲಿ ಬರುವ ಹಾಡುಗಳಲ್ಲಿ ಜನಪದ ಲಯವನ್ನು ಗುರುತಿಸಬಹುದಾಗಿದೆ. ಹೀಗೆ ಗೀತ ನಾಟಕಗಳಲ್ಲಿ ಕೆಲವು ಸಂಪೂರ್ಣವಾಗಿ ಗೀತೆಗಳಿಂದ ಕೂಡಿದ್ದ ಸಂಗೀತ ಪ್ರದಾನ ಪ್ರದರ್ಶನಗಳಾದರೆ ಇನ್ನೂ ಕೆಲವು ನಾಟಕಗಳಲ್ಲಿ ಸಂಭಾಷಣೆಗಳು ಕಾವ್ಯಮಯವಾಗಿದ್ದು, ಗೇಯತೆಯಿಂದ ಕೂಡಿರುತ್ತವೆ. ಅಂತೆಯೆ ಡಾ. ಬಸವರಾಜ ಸಬರದರ ಗೀತ ನಾಟಕವಾದ ಬೆಳ್ಳಕ್ಕಿ ಸಾಲು ಈ ಎರಡನೆ ಪರಂಪರೆಗೆ ಸೇರುತ್ತದೆ. ಇತ್ತೀಚಿನ ಯುವ ಪೀಳಿಗೆಯ

---

೪. ಬೆಳ್ಳಕ್ಕಿ ಸಾಲು, ಡಾ. ಬಸವರಾಜ ಸಬರದ, ಪುಟ–VI,VII,

ನಾಟಕಕಾರರಲ್ಲಿ ಪು.ತಿ.ನ. ಅವರ ನಂತರ ಈ ಕ್ಷೇತ್ರಕ್ಕೆ ಹೆಚ್ಚು ಸೇವೆ ಸಲ್ಲಿಸಿದವರು ಡಾ. ಬಸವರಾಜ ಸಬರದರ ಕೊಡುಗೆ ವಿಶಿಷ್ಟವಾಗಿದೆ.

## ಬೆಳ್ಳಕ್ಕಿ ಸಾಲುಃ

ಈ ಗೀತ ನಾಟಕದ ಕಥಾವಸ್ತು ಪ್ರೀತಿ, ಪ್ರೇಮಗಳನ್ನು ಕುರಿತು ಒಂದು ಕಾಲ್ಪನಿಕ ವಸ್ತುವನ್ನು ನಾಟಕಕಾರ ಒಂದು ಸುಂದರವಾದ ನಾಟಕವಾಗಿ ಹೆಣೆದಿದ್ದಾರೆ. ವಸ್ತು ಬಹಳ ಸರಳವಾದುದೆನಿಸಿದರೂ ಅಲ್ಲಿಯ ಅನುಭವ ವೈವಿಧ್ಯಮಯವಾಗಿದೆ. ರಾಜಕುಮಾರಿಯೊಬ್ಬಳು ಕವಿಯನ್ನು ಪ್ರೀತಿಸುತ್ತಾಳೆ. ಕವಿಯು ಅವಳ ಸೌಂದರ್ಯಕ್ಕೆ ಮಾರು ಹೋಗುತ್ತಾನೆ. ಕವಿಯ ಪ್ರತಿಭಾ ಶಕ್ತಿಗೆ ಅವಳು ಮರಳಾಗುತ್ತಾಳೆ. ಇವರಿಬ್ಬರಲ್ಲಿಯೂ ಪ್ರೇಮಾಂಕುರವಾಗುತ್ತದೆ. ಈ ವಿಷಯ ತಿಳಿದ ರಾಜ ಮಗಳ ಸ್ವಯಂವರ ಏರ್ಪಡಿಸಿ, ಬೇರೆ ರಾಜನೊಂದಿಗೆ ಮಗಳ ಮದುವೆ ಮಾಡಲು ನಿರ್ಧರಿಸುತ್ತಾನೆ. ಆದರೆ ರಾಜಕುಮಾರಿ ಸ್ವಯಂವರವನ್ನು ಧಿಕ್ಕರಿಸಿ, ಕವಿಯನ್ನೇ ಮದುವೆಯಾಗುವುದಾಗಿ ಹೇಳುತ್ತಾಳೆ. ಈ ಗೀತ ನಾಟಕದಲ್ಲಿ ಕವಿ ಪವಿತ್ರ ಪ್ರೇಮದ ಪ್ರತೀಕವಾಗಿ ನಾಟಕವನ್ನು ಹೆಣೆದಿದ್ದಾರೆ. ಮತ್ತು ಪ್ರೇಮದ ಮುಂದೆ ಯಾವುದೇ ಅಧಿಕಾರ ಅಂತಸ್ತು ಸೊನ್ನೆವಾಗುವಂತಹದ್ದು, ಈ ನಾಟಕದಲ್ಲಿ ಕಂಡು ಬರುತ್ತದೆ. ನಿಜವಾದ ಪ್ರೇಮಿಗಳು ತಮ್ಮ ಪ್ರಾಣದ ಹಂಗನ್ನು ಮೀರಿ, ಅವರು ಒಂದಾಗಲು ಹಾತೋರೆಯುವಂತೆ ದೃಶ್ಯಗಳು ನಾಟಕಕಾರ ಮಾರ್ಮಿಕವಾಗಿ ಮನದಟ್ಟುವಾಗುವ ಹಾಗೆ ಚಿತ್ರಿಸಿದ್ದಾರೆ.

ಈ ನಾಟಕದಲ್ಲಿ ಕವಿ ತನ್ನ ಕವಿತಾ ಶಕ್ತಿಯಿಂದ ರಾಜಕುಮಾರಿಯ ಮನಸ್ಸು ಗೆದ್ದಂತದ್ದು, ಮತ್ತು ಇಲ್ಲಿಯ ರಾಜನಿಗೆ ಈ ವಿಷಯ ತಿಳಿದ ಮೇಲೆ ರಾಜಕುಮಾರಿಯನ್ನು ಗೃಹ ಬಂಧನದಲ್ಲಿ ಇಟ್ಟದ್ದು, ರಾಜಕುಮಾರಿ ಅಲ್ಲಿಂದ ತಪ್ಪಿಸಿಕೊಳ್ಳುವಂತದ್ದು, ಇದು ನಿಜವಾದ ಪವಿತ್ರ ಪ್ರೇಮದ ಸಂಕೇತವಾಗಿ ಮೂಡಿ ಬಂದಿದೆ. 'ರಾಜಕುಮಾರಿ ಆಕೆಯ ಪ್ರೇಮಿಯಾದ ಕವಿ ಸಕಿಯರು, ಅರಗಿಣಿ, ನರ್ತಕಿ ಹೀಗೆ ಯಾವುದೋ ಭಾವನಾ ಲೋಕಕ್ಕೆ ಒಯ್ಯುವ ಈ ನಾಟಕದಲ್ಲಿ ಆಧುನಿಕತೆಯನ್ನು ನಿರೀಕ್ಷಿಸುವಂತಿಲ್ಲ. ಕವಿಯನ್ನು ಒಲಿದ ರಾಜಕುಮಾರಿ ಪ್ರೀತಿಗಾಗಿ ಸ್ವಯಂ ವರವನ್ನೇ ಧಿಕ್ಕರಿಸುತ್ತಾಳೆ[೫].

ನಾಟಕದಲ್ಲಿ ರಾಜನು ತನ್ನ ಮಗಳು ಕವಿ ಜೊತೆ ಪ್ರೀತಿ ಮಾಡುವ ವಿಷಯ ತಿಳಿದು ಸಿಟ್ಟಿಗೆದ್ದಾಗ ಅವನು ಕವಿಯ ಬಗ್ಗೆ ತನ್ನ ಅಭಿಪ್ರಾಯವನ್ನು ಹೀಗೆ ವ್ಯಕ್ತ ಪಡಿಸುತ್ತಾನೆ. ಕೆಳಮಟ್ಟದ

---

೫. ವೈಚಾರಿಕ ಸಾಹಿತ್ಯ-ಸಂಘರ್ಷ ಪುಟ-೫೪, ಜೂನ್-೧೯೯೪ ಬೆಂಗಳೂರು.

ವ್ಯಕ್ತಿಯಾದ ಕವಿಯನ್ನು ಪ್ರೀತಿಸುವುದು ನಮ್ಮ ಘನತೆ, ಗೌರವಕ್ಕೆ ಕುಂದು ಎಂದು ಹೇಳುತ್ತಾನೆ. ಆದರೆ ಆ ರಾಜನೆ ತಾನು ಕೀಳು ಕುಲದ ಸ್ತ್ರೀಯಾದ ಮಣಿಮಾಲಿನಿ ಜೊತೆ ಅನೈತಿಕ ಸಂಬಂಧ ಹೊಂದಲು ಹಾತೋರೆಯುವಂತದ್ದು ವಿಚಾರ ನೋಡಿದಾಗ ಈ ನಾಟಕ ಜಾತಿ ವ್ಯವಸ್ಥೆಯನ್ನು ಅಧಿಕಾರದಲ್ಲಿದ್ದವರು ಹೇಗೆ ಬಳಸಿಕೊಳ್ಳುತ್ತಿದ್ದಾರೆ ಎಂಬುವುದಕ್ಕೆ ಈ ಬೆಳ್ಳಕ್ಕಿ ಸಾಲು ನಾಟಕ ಉತ್ತಮವಾದ ಉದಾಹರಣೆಯಾಗಿದೆ.

ಈ ವಿಚಾರದಲ್ಲಿ ನಾಟಕವನ್ನು ಓದುವಂತಹ, ನೋಡುವಂತಹ ಪ್ರೇಕ್ಷಕರಿಗೆ ಇದು ತುಂಬಾ ಸೂಕ್ಷ್ಮವಾಗಿ ಕಂಡು ಬರುತ್ತದೆ. 'ರಾಜಕುಮಾರಿಯಾದ ತನ್ನ ಮಗಳು ಕೀಳು ಕುಲದ ಕವಿವೋರ್ವನನ್ನು ಪ್ರೀತಿಸುವುದನ್ನು ತಿಳಿದು, ಕುದ್ರನಾದ ಕ್ರೂರ ರಾಜನೋರ್ವನಿಗೆ ಅರಮನೆಯ ಗಿಳಿಯು, ಸ್ವಾತಂತ್ರ್ಯತೆ, ಸಮಾನತೆಯ ಪಾಠ ಹೇಳಿ, ಶಿಕ್ಷಿಸುವಂತಹ ಕಥಾ ಹಂದರವುಳ್ಳ ಈ ಗೀತ ನಾಟಕದಲ್ಲಿ ಪ್ರೀತಿ ಮತ್ತು ಕವಿತೆಗಳ ಶಕ್ತಿ ಮತ್ತು ಪಾವಿತ್ರ್ಯವನ್ನು ಸುಂದರ ಶಬ್ದ ಸಾಲುಗಳ ಬಾಜಾ ಬಜಂತ್ರಿಯೊಂದಿಗೆ ಮೆರವಣಿಗೆ ಮಾಡಲಾಗಿದೆ[೬].

ಕವಿಯಾದಂತಹ ವ್ಯಕ್ತಿ ರಾಜಕುಮಾರಿಯನ್ನು ಪ್ರೀತಿಸುವಂತಹ ವಿಚಾರವನ್ನು ರಾಜನಿಗೆ ತಿಳಿಸಬೇಕೋ ಅವನ ಒಪ್ಪಿಗೆ ಪಡೆಯಬೇಕೋ ಎಂಬ ನಿಲುವಿಗೆ ಬಂದಾಗ ರಾಜಕುಮಾರಿ ಇದಕ್ಕೆ ಅವಕಾಶ ಕೊಡದೇ, ಏಕೆಂದರೆ ಅವಳಿಗೆ ತನ್ನ ತಂದೆಯ ಸ್ವಭಾವ ಗೊತ್ತಿದ್ದು, ಇದರಿಂದ ತನ್ನ ಪ್ರೀಯತಮನಿಗೆ ತೊಂದರೆಯಾಗುತ್ತದೆಯೆಂದು ಭಾವಿಸಿದಳು. ಈ ವಿಚಾರದಲ್ಲಿ ರಾಜಕುಮಾರಿ ಕವಿಯನ್ನು ರಾಜನಿಗೆ ಭೇಟಿಯಾಗದಂತೆ ತಡೆಯುತ್ತಾಳೆ. ಈ ನಾಟಕ ಓದುತ್ತಿದ್ದಂತೆ, ನೋಡುತ್ತಿದ್ದಂತೆ ಓದುಗರು ಪೂರ್ತಿಯಾಗಿ ಈ ನಾಟಕದಲ್ಲಿ ಮೈಮರೆತು ಬಿಡುತ್ತಾರೆ. ಮತ್ತು ಅವರೂ ಕೂಡ ಈ ನಾಟಕದ ಒಂದು ಪಾತ್ರವೆಂದು ಭಾವಿಸಿಕೊಳ್ಳುವಂತೆ ಆಕರ್ಷಣೆಯಿಂದ ಕೂಡಿದೆ. ಈ ನಾಟಕದಲ್ಲಿ ಪ್ರಕೃತಿಯನ್ನು ಬಹಳ ಸೂಕ್ಷ್ಮವಾಗಿ ಹತ್ತಿರದಿಂದ ಕಂಡ ಲೇಖಕರು ಅದನ್ನು ಪರಿಣಾತ್ಮಕವಾಗಿ ಬಳಸಿದ್ದಾರೆ. ಈ ನಾಟಕದಲ್ಲಿ ಪ್ರಕೃತಿಯ ವಿಚಾರ ಹೇಳುವಂತ ಸಂದರ್ಭದಲ್ಲಿ ಕವಿಯು ೧೨ ನೇ ಶತಮಾನದ ವಚನಕಾರರ ಪ್ರಭಾವಕ್ಕೆ ಒಳಗಾದಂತೆ ಕಂಡು ಬರುತ್ತದೆ. ಅಕ್ಕಮಹಾದೇವಿಯ ಒಂದು ವಚನದ ಪ್ರಭಾವ "ಚಿಲಿಪಿಲಿ ಎಂದು ಹಾಡುವ ಹಕ್ಕಿಗಳೇ...." ಎಂಬ ವಚನದಂತೆ ಈ ನಾಟಕದಲ್ಲಿ

---

೬. ಸಂವಾದ ಪುಟ–೭೪, ಸೆಪ್ಟೆಂಬರ್, ಅಕ್ಟೋಬರ್–೧೯೯೩.

ಓ ಬನವೇ! ಓ ಮರವೇ!

ಎದೆತೆರೆದು ನಿಂತಿಹ ನೀಲಿಬಾನೆ!

ಚಿಲಿಪಿಲಿಗುಟ್ಟುವ ಹಕ್ಕಿಗಳೆ

ಹರಿವ ಹೊಳೆ ಹಳ್ಳಗಳೆ

ಹಾಡುವ ಕೋಗಿಲೆಗಳೆ

ನರ್ತಿಸುವ ನವಿಲುಗಳೆ[೭].

ಎಂಬ ವಿಚಾರಗಳು ಅಕ್ಕಮಹಾದೇವಿ ವಚನಕ್ಕೆ ಹತ್ತಿರವಾಗಿವೆ. ಪ್ರಸ್ತುತ ನಾಟಕದಲ್ಲಿ ಅರಗಿಣಿ, ಗಾಳಿ ಬೆಳಕು, ಹೊಳೆಯ ಹಳ್ಳ, ಪಶು ಪಕ್ಷಿ ಮುಂತಾದವುಗಳು ಪಾತ್ರಗಳಂತೆ ಭಾಗವಹಿಸುವುದು ಈ ನಾಟಕದ ವಿಶೇಷ. ಮನುಷ್ಯನು ಪ್ರೀತಿ ಪ್ರೇಮಗಳಿಗಾಗಿ ತನ್ನನ್ನೇ ಅರ್ಪಿಸಿಕೊಂಡು ಪ್ರಕೃತಿಯಲ್ಲಿ ಲೀನನಾಗುವ ಇಲ್ಲಿಯ ಕ್ರಿಯೆ ಬಹುಮುಖ್ಯವಾಗಿದೆ. ಎಂತಹ ಪರಿಸ್ಥಿತಿ ಬಂದರೂ ಪ್ರೀತಿ ಪ್ರೇಮವನ್ನು ಬಲಿ ಕೊಡದ ಇಲ್ಲಿಯ ರಾಜಕುಮಾರಿ ಮತ್ತು ಕವಿ ಮತ್ತೆ ಪ್ರಕೃತಿಯ ಮೂಲಕವೇ ಅದನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾರೆ. 'ನಿಜವಾದ ಪ್ರೇಮಿಗಳು ಜಾತಿ, ಮತ, ಅಂತಸ್ತುಗಳನ್ನು ಮೀರಿ, ನಿಲ್ಲುತ್ತಾರೆ ಎಂಬುವುದಕ್ಕೆ ಅಧಿಕಾರ ಕೌರ್ಯ, ದರ್ಪಗಳನ್ನು ಮೆಟ್ಟಿ ನಿಲ್ಲುತ್ತಾರೆಂಬುವುದಕ್ಕೆ ಬೆಳ್ಳಕ್ಕಿ ಸಾಲು ಈ ನಾಟಕ ಉತ್ತಮ ನಿದರ್ಶನವಾಗಿದೆ. ಬದುಕಿನ ಸಾರವೆ ಪ್ರೀತಿಯೆಂದು ಸಾರುವ ಈ ನಾಟಕದ ಮೌಲ್ಯ ದೊಡ್ಡದು.

ಹಿಡಿದ ಕೈ ಬಿಡುವುದಕ್ಕೆ ರಣಹೇಡಿ ನಾನಲ್ಲ. ಖಡ್ಗಗಿಂತಲೂ ಹರಿತ ಕವಿಯ ವಾಣಿ ಎಂದೆನ್ನುವ ಕವಿಯ ನುಡಿಯಲ್ಲಿ ಮತ್ತು ಪ್ರೀತಿ ಪ್ರೇಮದ ಮುಂದೆ ಯಾತರದೋ ಅಂತಸ್ತು? ನೀತಿ ನ್ಯಾಯದ ಮುಂದೆ ಎಲ್ಲಿ ಇಹೋದು ಜಾತಿ ಕುಲ? ಎಂದು ಕೇಳುವ ರಾಜಕುಮಾರಿಯ ಮಾತಿನಲ್ಲಿ ಪ್ರೀತಿಯ ಅನಂತತೆಯನ್ನು ಕಾಣಬಹುದಾಗಿದೆ[೮].

ಅಧಿಕಾರದಲ್ಲಿದ್ದವರು ಜನರ ಮೇಲೆ ಮಾಡುವ ದಬ್ಬಾಳಿಕೆಯನ್ನು ಈ ನಾಟಕದ ಪರಿಣಾತ್ಮಕವಾಗಿ ಚಿತ್ರಿಸಿದೆ. ರಾಜನಾದಂತಹವನು ಪ್ರಜೆಗಳನ್ನು ಜನರನ್ನು ಯಾವ ದೃಷ್ಟಿಯಿಂದ ನೋಡಬೇಕೋ ಅವರ ಸುಖ ದುಖಗಳಲ್ಲಿ ಹೇಗೆ ಭಾಗವಹಿಸಬೇಕೊ ಎಂಬ ವಿಚಾರ ಇರದೇ ಇರುವಂತದ್ದು ಅಧಿಕಾರದಲ್ಲಿದ್ದ ರಾಜನು ತನ್ನ ಸಮಾಜದಲ್ಲಿ ಸ್ತ್ರೀಯರನ್ನು ನೋಡುವಂತಹ ದೃಷ್ಟಿಕೋನ ತಾನು ಇಷ್ಟಪಟ್ಟ ಹೆಣ್ಣನ್ನು ಭೋಗಿಸುವುದು, ಅದಕ್ಕೆ ಅವಳು ಒಪ್ಪದಿದ್ದರೆ ಒತ್ತಾಯವಾಗಿ

---

೭. ಬೆಳ್ಳಕ್ಕಿ ಸಾಲು, ಡಾ. ಬಸವರಾಜ ಸಬರದ ಪುಟ–೮೨, ವರ್ಷ ೨೦೦೦

೮. ಬೆಳ್ಳಕ್ಕಿ ಸಾಲು, ಡಾ. ಬಸವರಾಜ ಸಬರದ ಪುಟ–IX.

ಅವರನ್ನು ಒಪ್ಪಿಸಲು, ಇದರ ಸಲುವಾಗಿ ಅಮಾಯಕ ಜನರ ಸಂಬಂಧಿಗಳ ಕೊಲೆ ಮಾಡುವಂತದ್ದು, ಈ ನಾಟಕದಲ್ಲಿ ಕಂಡು ಬಂದಿದೆ. ಆದರೆ ಅಧಿಕಾರಶಾಹಿಯಲ್ಲಿ ರಾಜನು ತನಗೆ ತಿಳಿದಂತೆ ಮಾಡುವುದು, ಕಂಡು ಬರುತ್ತದೆ.

'ಮಣಿಮಾಲಿನಿ' ಎಂಬ ನರ್ತಕಿಯಿಂದ ಅರಸನಿಗೆ, ಸೇನಾಪತಿಗಳಿಗೆ ಉತ್ತಮವಾದ ಉತ್ತರ ನೀಡುವಂತದ್ದು ಸಮಾಜಕ್ಕೆ ಇದು ಒಂದು ನಿದರ್ಶನವಾಗಿದೆ. ಒಬ್ಬ ಸಾಮಾನ್ಯ ಕವಿಯಾದವನು ಪ್ರೀತಿಯ ವ್ಯವಸ್ಥೆಯಲ್ಲಿ ಅವನ ಬರವಣಿಗೆ ಎಷ್ಟು ಪರಿಣಾಮಕಾರಿ ಮತ್ತು ಒಂದು ವ್ಯವಸ್ಥೆಯನ್ನೇ ಎದುರು ಹಾಕಿಕೊಂಡು, ವಿಜಯ ಸಾಧಿಸುವಂತಹ ಪ್ರಯತ್ನ ಈ ನಾಟಕದಲ್ಲಿ ಕಂಡು ಬಂದಿದೆ. ಈ ನಾಟಕದಲ್ಲಿ ಕವಿಯ ಪಾತ್ರ ಪ್ರಮುಖವಾಗಿದೆ. ಕಾವ್ಯ ಕೂಡ ಖಡ್ಗವಾಗಬಲ್ಲದೆಂಬುವುದನ್ನು ಕವಿ ಇಲ್ಲಿ ತೋರಿಸಿಕೊಟ್ಟಿದ್ದಾನೆ.

ಹೆಣ್ಣನ್ನು, ಸಮಾಜವನ್ನು, ಪ್ರಕೃತಿಯನ್ನು ಕಾಣುವ ಕವಿಯ ದೃಷ್ಟಿ ಕೋನ ವಿನೂತನವಾಗಿದೆ. ಇಂತಹ ಕವಿಯ ಕೈ ಹಿಡಿಯಲು ರಾಜಕುಮಾರಿ ಸ್ವಯಂವರವನ್ನು ಧಿಕ್ಕರಿಸಿ ಅರಮನೆಯನ್ನು ತೊರೆಯುತ್ತಾಳೆ. ಮಣಿಮಾಲಿನಿ ಎಂತಹ ನರ್ತಕಿ ಕೀಳು ಕುಲದಲ್ಲಿ ಹುಟ್ಟಿದ್ದರೂ ಶೀಲ, ಸ್ವಾಭಿಮಾನ ಬಹುಮುಖ್ಯವಾದುದ್ದೆಂದು ತಿಳಿದು, ಉನ್ನತ ಮೌಲ್ಯವನ್ನು ಸಾರುತ್ತಾಳೆ. ರಾಣಿ ಹೆಣ್ಣಿನ ಅಂತರಂಗವನ್ನು ಅರ್ಥ ಮಾಡಿಕೊಂಡು ಅವರಿಗೆ ಸಹಾಯ ಮಾಡುತ್ತಾಳೆ. ಹೀಗೆ ಇಲ್ಲಿನ ಸ್ತ್ರೀ ಪಾತ್ರಗಳು ವಾಸ್ತವ ಬದುಕಿಗೆ ಸ್ಪಂದಿಸುತ್ತಲೇ ನೀತಿ ಸ್ವಾಭಿಮಾನ, ಪ್ರೀತಿಯಂತಹ ಮೌಲ್ಯಗಳನ್ನು ಎತ್ತಿ ಹಿಡಿಯುತ್ತದೆ [೯].

'ಕವಿ ಮತ್ತು ರವಿ ಎಂದೂ ಸಾಯುವುದಿಲ್ಲ, ತಿಳಿಯೆ ದೊರೆ, ಯಾವ ರಾಜನೇ ಬರಲಿ, ಯಾವ ಸಚೀವನೇ ಬರಲಿ ನಿತ್ಯವು ಮೂಡುವನು ರವಿಯೂ ಇಲ್ಲಿ ಎಂಬ ಮಾರ್ಮಿಕ ನುಡಿಯಿಂದ ಅರಗಿಣಿ ರಾಜರ ದಬ್ಬಾಳಿಕೆಯನ್ನು ವಿರೋಧಿಸುತ್ತದೆ ಹಾಗೂ ಜೀವನದ ಮೌಲ್ಯಗಳ ಅಂತರ್ ಮುಖವನ್ನು ರಾಜನಿಗೆ ತಿಳಿಸುವಲ್ಲಿ ಯಶಸ್ವಿಯಾಗುತ್ತದೆ[೧೦] ಕವಿಯ ಹಾಡು ನನ್ನಲ್ಲಿದೆ, ನನ್ನ ಹಾಡು ಬಯಲಲ್ಲಿದೆ ಆ ಬಯಲು ಭೂಮಿಯಲ್ಲಿದೆ, ಬೀಸುತ್ತಿರುವ ಮರ, ಬಳ್ಳಿ, ಹರಿಯುತ್ತಿರುವ ಹೊಳೆ, ಹಳ್ಳ, ಬೆಳೆದು ನಿಂತಿರುವಂತಹ ಬೆಟ್ಟ ಗುಡ್ಡ ಎಲ್ಲದರಲ್ಲಿ ಕವಿಯ ಹಾಡಿದೆ. ಗಾಳಿಯಲ್ಲಿ, ಮಳೆಯಲ್ಲಿ, ಇರುಳಲ್ಲಿ, ನೆರಳಲ್ಲಿ ಕವಿಯ ಉಸಿರಿದೆ. ಇಂತಹ ಕವಿಯ ಉಸಿರು ಅಮರ. ಇಂತಹ ಕವಿಯ ಹಾಡು ಅಚಲ ಇದು ಅರಗಿಣಿ ರಾಜರಿಗೆ ಹೇಳುವ ಮಾತು. ಒಟ್ಟಾರೆ ಕೃತಿಯ ಸಂದೇಶ ವಾಸ್ತವದ ಸತ್ಯ, ರಾಜನಿಂದ

---

೯. ಬೆಳ್ಳಕ್ಕಿ ಸಾಲು, ಡಾ. ಬಸವರಾಜ ಸಬರದ ಪುಟ-IX.

೧೦. ಸಂಯುಕ್ತ ಕರ್ನಾಟಕ ದಿನ ಪತ್ರಿಕೆ ದಿನಾಂಕಃ ೧೫-೧೦-೨೦೦೦ (ಪುಸ್ತಕ ವಿಚಾರ)

ಶೂಲಕ್ಕೇರಿಸಲ್ಪಟ್ಟರೂ ಕವಿ ಆತನ ಹಾಡು ಮರ ಬಳ್ಳಿಗಳಲ್ಲಿ, ಹಕ್ಕಿ ಪಕ್ಷಿಗಳಲ್ಲಿ, ಹೊಳೆ ಹಳ್ಳಗಳಲ್ಲಿ, ಗುಡ್ಡ ಬೆಟ್ಟಗಳಲ್ಲಿ, ಗಾಳಿ ಬೆಳಕುಗಳಲ್ಲಿ ಪ್ರತಿಬಿಂಬಿತವಾಗಿದೆ. ರಾಜಕುಮಾರಿ ಜೊತೆ ಈ ಪ್ರಕೃತಿಯು ಜೀವನ ಸಂದೇಶವನ್ನು ಸಾರುವ, ಪಾತ್ರಧಾರಿಗಳಾಗಿ ಕವಿಯನ್ನು ಅಮರವಾಗಿಸಿದೆ [೧೧].

ಒಟ್ಟಾಗಿ ಬೆಳ್ಳಕ್ಕಿ ಸಾಲು, ಗೀತ ನಾಟಕವು ಪ್ರೇಕ್ಷಕರನ್ನು ಓದುಗರನ್ನು ಪರಿವರ್ತನೆ ಮಾರ್ಗದಲ್ಲಿ ನಡೆಸುವಂತಹ ಮತ್ತು ಪವಿತ್ರ ಪ್ರೇಮಕ್ಕೆ ಯಶಸ್ವಿ ಚಿಗುರು ಮೂಡುವಂತಹ ಕವಿಯಾದವನಿಗೆ ಯಾರೂ ಕೂಡಾ ಕೊನೆಗಾಣಿಸಲು ಸಾಧ್ಯವಿಲ್ಲ ಎಂಬ ವಿಚಾರ ಸ್ತ್ರೀ ಪಾವಿತ್ರತೆಯ ಬೆಲೆ, ದಬ್ಬಾಳಿಕೆ ಆಡಳಿತ ವ್ಯವಸ್ಥೆಯಿಂದ ಆಗುವ ಅನಾಹುತ ಪ್ರಕೃತಿಯ ಸಂಬಂಧಗಳು ಇದರಿಂದ ಮನುಷ್ಯನು ಕಲಿಯಬೇಕಾದ ವಿಚಾರಗಳು ತುಂಬಾ ಇವೆ ಎಂಬುವುದು ಈ ನಾಟಕದಿಂದ ತಿಳಿದು ಬರುತ್ತದೆ. ನಾಟಕದಲ್ಲಿ ಬಳಸಿದ ಭಾಷೆ, ತುಂಬ ಪರಿಣಾಮಕಾರಿಯಾಗಿ ಮನಮುಟ್ಟುವಂತೆ ಮೂಡಿಬಂದಿದೆ. ನಾಟಕವನ್ನು ಓದುವಾಗ ಸ್ವಾದಕ್ಕೆ ಭಂಗ ಬರುವ ರೀತಿಯಲ್ಲಿಯೂ ಕೂಡ ಕಂಡು ಬರುವುದಿಲ್ಲ.

ಇಲ್ಲಿನ ಪ್ರತಿಯೊಂದು ಪಾತ್ರವು ತನ್ನದೇಯಾದ ಸಂದೇಶವನ್ನು ನೋಡುವವರಿಗೆ, ಓದುಗರಿಗೆ ನೀಡುತ್ತದೆ. ಮನುಷ್ಯನೇಯಾಗಿರಲೀ, ಪಕ್ಷಿಗಳೇಯಾಗಿರಲೀ, ಗಿಡ ಬಳ್ಳಿಗಳೆಯಾಗಿರಲೀ ಅವು ತಮ್ಮ ಪ್ರಮಾಣೀಕತೆಯನ್ನು ಮತ್ತು ಅವಲಂಬನಾ ಜೀವನವನ್ನು ಈ ಚಿತ್ರಣಗಳ ಮೂಲಕ ಸಂದೇಶ ನೀಡುತ್ತದೆ. ನಾಟಕವನ್ನು ಓದುತ್ತಾ ಹೋದಂತೆ ಅದು ಕೊಡುವ ಆನಂದ ಎಂತಹ ಎಂಬುವುದು ಕಂಡು ಬರುತ್ತದೆ. ಈ ನಾಟಕವು ಓದುಗರಿಗೆ ಕಲ್ಪನೆ ಶಕ್ತಿ ವರ್ಣನಾ ವಿಚಾರ ಪ್ರಯೋಗಶೀಲವಾಗಿ ಮೂಡಿಬಂದಿದೆ. ಒಟ್ಟಿನಲ್ಲಿ ಬೆಳ್ಳಕ್ಕಿ ಸಾಲು ಎಂಬ ಗೀತ ನಾಟಕ ಜನ ಮೆಚ್ಚುವಂತಹದ್ದಾಗಿದೆ. ಮತ್ತು ಸಮಾಜ ಪರಿವರ್ತನಾ ಶೀಲ ವಿಚಾರಗಳು ತುಂಬಿವೆ ಎಂದು ಹೇಳಬಹುದು.

**ಬೆಳ್ಳಕ್ಕಿ ಸಾಲು ನಾಟಕದ ಪಾತ್ರಗಳುಃ**

ಈ ಬೆಳ್ಳಕ್ಕಿ ಸಾಲು ನಾಟಕದಲ್ಲಿ ಸುಮಾರು ೧೭ ಪಾತ್ರಗಳು ಕಂಡು ಬರುತ್ತವೆ. ಅದರಲ್ಲಿ ಕವಿ, ರಾಜಕುಮಾರಿ, ರಾಜ, ರಾಣಿ, ಮಂತ್ರಿ, ಸೇನಾಪತಿ, ಸೂರಸೇನಾ, ಮಣಿಮಾಲಿನಿ, ಸಖಿ–೧, ಸಖಿ–೨ ಒಬ್ಬ, ಇನ್ನೊಬ್ಬ, ಸೇವಕ, ಡಂಗೂರದವ, ದಾಸಯ್ಯ, ಅರಗಿಣಿ, ಸೈನಿಕರು ಮುಖ್ಯವಾಗಿದ್ದಾರೆ. ಈ ನಾಟಕದಲ್ಲಿ ಅರಸಿ, ರಾಜಕುಮಾರಿ, ಮಣಿಮಾಲಿನಿ ಮೂವರು ಪಾತ್ರಗಳು ಮುಖ್ಯವಾಗಿ ಸ್ತ್ರೀ ಚಿಂತನೆ, ಕಾಳಜಿ, ಕಾಣುತ್ತಿವೆ. ಸ್ತ್ರೀ–ಸಮಾಜ–ಪ್ರಕೃತಿ ಮೂರನ್ನು ಒಂದರೊಳಗೊಂದು ಹೆಣಿಯುವ ವಿಶಿಷ್ಟ ಶೈಲಿ ಈ ನಾಟಕದಲ್ಲಿ ಕಂಡು ಬರುತ್ತವೆ. ಇಡೀ ನಾಟಕದ

---

೧೧. ಅಂಬೇಡ್ಕರ ವಾಹಿನಿ, ಪುಟ–೩೦, ಮಾರ್ಚ್ ಸಂಪಾದಕರು ಡಿ.ಎನ್. ರಘುರಾಮ.

ಪಾತ್ರಗಳು ಸಂಪೂರ್ಣ ವಿಫಲತೆ ಹೊಂದಿವೆ. ಏಕೆಂದರೆ ರಾಜಕುಮಾರಿ ತಾನು ಬಯಸುವ ಕವಿ ಸಿಗದೇ ಇರುವುದು, ಅಂತಸ್ತು–ರಾಜ ಪ್ರಭುತ್ವ ತಳಹದಿ ಮೇಲೆ ಬದುಕಬೇಕೆಂಬ ರಾಜ್ಯ ವಿಚಾರದಲ್ಲಿ ವಿಫಲನಾಗುತ್ತಾನೆ. ನೃತ್ಯಗಾರತಿ, ಮಣಿಮಾಲಿನಿ ತನ್ನ ಶೀಲ ಕಳೆದುಕೊಳ್ಳುವುದು, ಸೂರಸೇನಾ ತನ್ನ ತಂಗಿಯನ್ನು ಉಳಿಸಿಕೊಳ್ಳದೇ ಸಾಯುವಂತದ್ದು, ವಾಸ್ತವದ ಕಟು ಸತ್ಯವನ್ನು ಬೇರೆ ಬೇರೆ ಪಾತ್ರಗಳ ಮೂಲಕ ಚರ್ಚೆಗೆ ಒಳಪಡಿಸಲಾಗಿದೆ. ಇವು ಈ ನಾಟಕದ ಪ್ರಮುಖ ಪಾತ್ರಗಳಾಗಿ ಮೂಡಿಬಂದಿವೆ.

**ಭಾಷೆಃ**

ಬೆಳ್ಳಕ್ಕಿ ಸಾಲು ನಾಟಕದ ಭಾಷೆ, ಶೈಲಿ, ಸರಳ ಭಾಷೆ, ನುಡಿಕಟ್ಟು, ಕಾವ್ಯಾತ್ಮಕ ಅಂಶ, ಸಂಭಾಷಣೆ ಸನ್ನಿವೇಶ ದೃಶ್ಯಗಳನ್ನು ಪ್ರತಿಮೆ ಪ್ರತೀಕ ಸಂಕೇತಗಳಿಂದ ವಿಶಿಷ್ಟ ಆಲೋಚನೆ ಚಿಂತನೆ ಇದೆ. ಭಾಷೆ ಸರಳವಾಗಿದ್ದರೂ ನೇರವಾಗಿದೆ. ಸಂಭಾಷಣೆಯುತ ಭಾಷೆಗಳು ಓದುತ್ತಾ ಹೋದಂತೆಲ್ಲಾ ಕಾವ್ಯ ಕೊಡುವ ಸಂತೋಷ ಎಷ್ಟು ಎಂಬುವುದು ತಿಳಿಯುತ್ತದೆ. ಇದು ಒಂದು ಉತ್ತಮವಾದ ಪದ್ಯ ನಾಟಕದ ಭಾಷೆಯಾಗಿದೆ.

## ಬೀದಿ ನಾಟಕಗಳು

ಇತ್ತೀಚಿನ ಕನ್ನಡ ಸಾಹಿತ್ಯದಲ್ಲಿ ಬೀದಿ ನಾಟಕಗಳು ಬಹಳ ಪ್ರಮುಖವಾಗಿ, ಪರಿಣಾಮಕಾರಿಯಾಗಿ ಕಂಡು ಬಂದಿವೆ. ಹೆಸರೇ ಸೂಚಿಸುವಂತೆ ಬೀದಿಯಲ್ಲಿ ನಿಂತು ಮಾಡುವ ನಾಟಕಗಳಿಗೆ ಬೀದಿ ನಾಟಕಗಳೆಂದು ಕರೆಯುವರು. ಸಾಹಿತ್ಯ ಸಾಮಾನ್ಯರ ಕೈಗೆ ಸೇರುವ ಸಂದರ್ಭಗಳು ಕ್ಷೀಣಿಸಿದಾಗ ಸಾಹಿತ್ಯದ ಮತ್ತೊಂದು ಮುಖವಾಗಿ ಮನೋರಂಜನೆಯ ಲೇಪದೊಂದಿಗೆ ಹುಟ್ಟಿಕೊಂಡಿದ್ದು, ಬೀದಿ ನಾಟಕಗಳು.

ಜನಪದರಿಗೆ ನೇರವಾಗಿ ತಲುಪಬಹುದಾಗಿದ್ದ ಒಂದು ಸಮರ್ಥ ಮಾಧ್ಯಮದ ಹುಡುಕಾಟ ಪ್ರಾರಂಭವಾಗಿತ್ತು. ಹಾಗೆ ಒಂದು ಬಲವೊತ್ತರವಾದ ಅಕ್ಷರಸ್ಥರು ಮತ್ತು ಅನಕ್ಷರಸ್ಥರು ಇಬ್ಬರಿಗೂ ಕಡಿಮೆ ಖರ್ಚಿನಲ್ಲಿ ಎಷ್ಟೋ ಸಲ ಖರ್ಚು ಇಲ್ಲದೇ ತಲುಪಬಹುದಾದ ಮಾಧ್ಯಮದ ಶೋಧನೆಯಲ್ಲಿದ್ದಾಗ ಸಹಜವಾಗಿ ಕಂಡು ಬಂದದ್ದು, ಬೀದಿ ನಾಟಕ. ಬೀದಿ ನಾಟಕ ಸಾಮಾಜಿಕ ಸಮಸ್ಯೆಗಳಿಗೆ ಸ್ಪಂದಿಸುವ ಜನಪರ ಹೋರಾಟಗಳಿಗೆ ಇಂಬು ಕೊಡುವ ಸ್ಥಾಪಿತ ಹಿತಾಸಕ್ತಿಯ ಮೌಲ್ಯ ಮತ್ತು ವ್ಯವಸ್ಥೆಯ ವಿರುದ್ಧ ಪ್ರತಿಭಟನೆಗೆ ಜೀವ ತುಂಬುವ ಉದ್ದೇಶ ಹೊಂದಿದೆ.

ಸಾಮಾನ್ಯವಾಗಿ ನಾಟಕ ನಡೆಯುವ ಕಡೆಗೆ ಜನ ಹೋಗಿ ನೋಡುವುದು ವಾಡಿಕೆ. ಆದರೆ ಬೀದಿ ನಾಟಕಗಳು ಜನರ ಕಡೆಗೆ ನಾಟಕವನ್ನು ಕೊಂಡೊಯ್ಯುವ ಒಂದು ವಿಶಿಷ್ಟ ಮನೋರಂಜನಾ ವಿದ್ಯಮಾನ. ಬೀದಿ ನಾಟಕಗಳ ಮುಖ್ಯ ಉದ್ದೇಶ ಮನೋರಂಜನೆಯೇ ಬೀದಿ ನಾಟಕಗಳು ತುಂಬಾ ಸರಳವಾಗಿರುತ್ತವೆ. ಅದರ ಸಾಮಾನುಗಳು ತುಂಬಾ ಕಡಿಮೆ. ಅವುಗಳಲ್ಲಿ ಸಾಂಕೇತಿಕತೆಗೆ ಹೆಚ್ಚು ಒತ್ತು ಕೊಡುತ್ತವೆ. ಅವು ನೋಡುಗರ ಗಮಕ್ಕೆ ತಿಳಿಯುವಂತೆ ಪ್ರದರ್ಶಿಸುತ್ತಾರೆ. ಬೀದಿ ನಾಟಕ ಗೋಡೆ ಬರಹದ ಮಾಧ್ಯಮದಂತೆ ಯಾರೂ ಹಂಗಿಗೂ ಒಳಗಾಗದೇ ಹೇಳಬೇಕಾದದ್ದನ್ನು ನೇರವಾಗಿ ಹೇಳುತ್ತವೆ. ಅವುಗಳಿಗೆ ಯಾವುದರ ಹಂಗಿಲ್ಲ. ಬಣ್ಣ ಬೆಳಕು ಬೆಡಗಿನ ಅವಶ್ಯಕತೆ ಇಲ್ಲ. ಅದು ಜನಮನ ರಂಜನೆಯ ಸಾಧನೆಯ ಮೂಲಕ ಜನಮಾನಸವನ್ನು ತಿದ್ದಲು, ತೀಡಲು ಪ್ರಯತ್ನಿಸುತ್ತವೆ.

ಈ ನಾಟಕ ಜನರ ದೈನಂದಿನ ಬದುಕಿನಲ್ಲಿ ಎಡ ಬಿಡದೆ ಕಾಡುವ ಸಮಸ್ಯೆ ಸವಾಲುಗಳನ್ನು ಒರೆಗೆ ಹಚ್ಚಿ, ನೋಡುವ ಪ್ರವೃತ್ತಿಯನ್ನು ಉದ್ದಿಪಿಸುತ್ತದೆ. ಯಾವುದನ್ನು ಕಣ್ಣು ಮುಚ್ಚಿ ಸ್ವೀಕರಿಸದೇ

ತಮ್ಮ ವಿಶ್ಲೇಷಣೆಗೆ ಗುರಿ ಮಾಡುವ ಪ್ರತಃ ಕರಣ ಬುದ್ಧಿಯಿಂದ ಬಿಚ್ಚಿ ಬಗೆದು ನೋಡುವ ಒಂದು ವಿಶಿಷ್ಟ ದೃಷ್ಟಿ ಮತ್ತು ಮನೋಧರ್ಮವನ್ನು ಬೆಳೆಸುವುದೇ ಬೀದಿ ನಾಟಕದ ಉದ್ದೇಶ. ಒಟ್ಟಿನಲ್ಲಿ ಹೇಳುವುದಾದರೆ. 'ಬೀದಿ ನಾಟಕ ಸಮಸ್ತ ಶೋಷಿತ ಜನಪದರ ಪ್ರಜ್ಞೆಯ ದಿಗಂತವನ್ನು ವಿಸ್ತರಿಸುತ್ತದೆ. ಅವರಲ್ಲಿ ಅರಿವಿನ ಸ್ಫೋಟವನ್ನು ಮಾಡುತ್ತದೆ. ಈ ಮೂಲಕ ಜನಪರ ವ್ಯಕ್ತಿಗಳು ಮತ್ತು ಪ್ರಗತಿಪರ ಪಕ್ಷ, ಸಂಘಟನೆಗಳು ಒಂದು ಕ್ರೀಯಾಶೀಲ ಕಾರ್ಯಕ್ರಮವನ್ನು ರೂಪಿಸಿ ನಡೆಸಬಹುದಾದ ವ್ಯಾಪಕ ಜನಾಂದೋಲನಕ್ಕೆ ಅನುವು ಮಾಡಿಕೊಡುತ್ತದೆ. ಕಲೆಯ ಮೂಲಕ ಅದು ಯಾವುದೇ ಪ್ರಕಾರದಿರಲೀ, ಕ್ರಾಂತಿ ಸಾಮಾಜಿಕ ಬದಲಾವಣೆ ಸಾಧ್ಯವಿಲ್ಲ ಎನ್ನುವರು ಕಲೆಯ ಮಿತಿ ಮತ್ತು ಸಾಧ್ಯತೆಯ ಎರಡು ಆಯಾಮಗಳಿಗೆ ಬೀದಿ ನಾಟಕದ ಸಾಧ್ಯತೆ ಮತ್ತು ಮಿತಿಯನ್ನು ಗಮನದಲ್ಲಿಟ್ಟುಕೊಂಡರೆ ಸಾಕು[೧೨].

ಈ ಬೀದಿ ನಾಟಕಗಳು ಜನಸಾಮಾನ್ಯರ ಬದುಕಿನ ನಿಜ ಚಿತ್ರಣವನ್ನು ಚಿತ್ರಿತವಾಗಿದೆ. ಸಾಮಾನ್ಯ ಜನರ ಬದುಕಿನ ಸಮಸ್ಯೆಗಳು ಗಾಂಭಿರ್ಯತೆಯನ್ನು ಕವಿ ನಾಟಕದಲ್ಲಿ ಹೆಣೆದಿದ್ದಾರೆ.

ಈ ಎಲ್ಲಾ ಬೀದಿ ನಾಟಕಗಳಲ್ಲಿ ಒಂದನೆಯದಾಗಿ ವಸ್ತು, ಜನ ಸಾಮಾನ್ಯರ ಸದ್ಯದ ಸಮಸ್ಯೆಗಳನ್ನೇ ಆರಿಸಿಕೊಂಡಿದ್ದಾರೆ. ಎರಡನೆಯದಾಗಿ ಕ್ಷಿಪ್ರತೆ ಮೂರನೆಯದಾಗಿ ಆ ನಾಟಕಗಳ ಭಾಷೆ ಜನ ಸಾಮಾನ್ಯರು ಆಡುವ ಭಾಷೆ ಬಳಸಿರುವುದು ಬೀದಿ ನಾಟಕಕ್ಕೆ ಹೆಚ್ಚಿನ ಯಶಸ್ಸು ಕಂಡಿದೆ. ಕೊನೆಯದಾಗಿ ಎಲ್ಲಾ ನಾಟಕದ ನೈಜ್ಯ ಸಮಸ್ಯೆಗಳಿಗೆ ಪರಿಹಾರ ಹುಡುಕುವುದು ಅದರ ಮೂಲ ಉದ್ದೇಶವಾಗಿದೆ. ಇದರ ಮುಖಾಂತರ ಜನರಿಗೆ ಜಾಗೃತರಾಗಿ ಮಾಡಿ, ಸಮಾಜದ ಏಳಿಗೆಯಲ್ಲಿ ಅಭಿವೃದ್ಧಿಯಲ್ಲಿ ಅವರು ಪಾಲುಗಾರರಾಗಬೇಕೆಂಬ ಮಹಾದಾಸೆಯನ್ನು ಈ ನಾಟಕಗಳಲ್ಲಿ ಕಾಣಬಹುದು.

ಅವರ ಮೂರು ಬೀದಿ ನಾಟಕಗಳಲ್ಲಿ 'ಹನುಮಾಯಣ', 'ರಂಪಾಯಣ', ಮತ್ತು ರೇಣುಕಾ ಮೇಡಂ ಎಂಬ ನಾಟಕಗಳು ರಚಿಸಿದ್ದಾರೆ. ಪ್ರಸ್ತುತ ಈ ನಾಟಕಗಳಲ್ಲಿ ಹಿಂದಿನ ಸಮಾಜದಲ್ಲಿ ಘಟಿಸುತ್ತಿರುವ ವಿವಿಧ ಬಗೆಯ ಶೋಷಣೆ, ಮೂಢನಂಬಿಕೆ, ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆದಿರುವ ರಾಜಕೀಯ ಭ್ರಷ್ಟಾಚಾರ ಅಧಿಕಾರದಲ್ಲಿದ್ದವರು ಮಾಡುವ ಭೇದ ಭಾವಗಳು, ಅಧಿಕಾರ ದುರುಪಯೋಗ, ಮೂಢನಂಬಿಕೆ ಹೀಗೆ ವಿವಿಧ ಬಗೆಯ ಘಟನೆಗಳ ಮೇಲೆ ಬೆಳಕು ಚೆಲ್ಲುವ ಮೂಲಕ ಜನತೆಗೆ ಎಚ್ಚರಿಕೆಯ ಗಂಟೆಯನ್ನು ಬಾರಿಸುತ್ತದೆ.

---

೧೨. ಬೀದಿ ನಾಟಕಗಳು, ಪುಟ–VI, VII, VIII, ಸಂಪಾದಕ ಆರ್.ಕೆ. ಹುಡುಗಿ.

ಜನರ ಜೀವನದ ಪರಿವರ್ತನೆ ಮತ್ತು ಸುಧಾರಣೆಗೆ ಒತ್ತು ನೀಡಬೇಕೆಂದು ಇಂತಹ ದುರ್ವ್ಯವಸ್ಥೆ ವಿರುದ್ಧ ಧ್ವನಿ ಎತ್ತಬೇಕೆಂದು ಈ ನಾಟಕದಿಂದ ಮನವರಿಕೆಯಾಗುತ್ತದೆ. 'ಇಂತಹ ನೈಜ್ಯ ಚಿತ್ರಣ ಜನಮನದ ಹೃದಯದ ಮೇಲೆ ಮೂಡಿಸಲು ಲೇಖಕರು ತಮ್ಮ ಲೇಖನೀಯ ತೀಕ್ಷ್ಣ ಬೆಳಕನ್ನು ಬೀರಲು ಪ್ರಯತ್ನಿಸಿದ್ದಾರೆ. ಈ ಕೃತಿಯಲ್ಲಿಯ ಮೂರು ನಾಟಕಗಳು ಒಂದೊಂದು ಬಗೆಯಲ್ಲಿ ಜನತೆಗೆ ಅರಿವಿನ ಬೆಳಕನ್ನು ನೀಡಬಲ್ಲವು. ಅದನ್ನು ಪಡೆದುಕೊಳ್ಳುವುದು ಜನತೆಗೆ ಬಿಟ್ಟಿದೆ. ಏಕೆಂದರೆ ಇಂದು ಜನತೆ ವಿಚಾರಿಸಬೇಕಾದ ಕಾಲ ಬಂದಿದೆ. ತಮ್ಮ ಒಳಿತಿಗಾಗಿ ತಾವೇ ತಮ್ಮನ್ನು ತಿದ್ದುಕೊಂಡು, ನಡೆಯಬೇಕೆ ವಿನಃ ಇಂದು ಒತ್ತಾಯದಿಂದ ಹೇರಲು ಬರದು. ಆದ್ದರಿಂದ ಈ ನಾಟಕಗಳು ಓದುಗರು, ನೋಡುಗರು, ವಿದ್ಯಾವಂತರು, ವಿದ್ಯಾರ್ಥಿಗಳು, ಸಮಾಜದ ಹಿತಚಿಂತಕರು ಓದುವುದಲ್ಲದೇ ಪ್ರಯೋಗಿಸಿದರೆ ಮಾತ್ರ ಈ ನಾಟಕದ ಉದ್ದೇಶ ಈಡೇರುತ್ತದೆ ಎಂಬ ವಿಚಾರ ಮೂಡಿಬಂದಿದೆ[೧೩].

**ಮೂರು ಬೀದಿ ನಾಟಕಗಳು**

**ಹನುಮಾಯಣ**

ಇದು ಮೊದಲನೆ ಬೀದಿ ನಾಟಕವಾಗಿದ್ದು, ಹಾಡುಗಳೊಂದಿಗೆ ಪ್ರಾರಂಭವಾಗುತ್ತದೆ. ಕವಿ ಹಾಡುಗಾರಿಕೆ ತಂತ್ರವನ್ನು ನೋಡುವವರ, ಓದುಗರ ಗಮನ ನಾಟಕದ ಕಡೆ ಕೇಂದ್ರಿಕೃತವಾಗಲೀ ಎಂಬ ಉದ್ದೇಶ ಹೊಂದಿದ್ದಾರೆ.

ಈ ನಾಟಕದಲ್ಲಿ ರಾಜಕೀಯ ಪಕ್ಷಗಳಿಗೆ ಸಿದ್ಧಾಂತ ಇಲ್ಲ ಮತ್ತು ಮರ್ಯಾದೆ ಇಲ್ಲ ಎಂಬುವುದು ಇಲ್ಲಿಯ ಮುಖ್ಯಮಂತ್ರಿಯಾಗಲೀ, ಮಂತ್ರಿಯಾಗಲೀ, ವಿರೋಧ ಪಕ್ಷದವರಾಗಲೀ ಒಂದೇ ವಿಚಾರವಂತರು. ತಮ್ಮ ಸ್ವಾರ್ಥಕ್ಕಾಗಿ ಅವರು ಎಲ್ಲಾ ಕೆಲಸ ಮಾಡಲು ಸಿದ್ಧರೆಂಬಂತೆ ಚಿತ್ರಿತವಾಗಿದೆ. ಈ ನಾಟಕದಲ್ಲಿ ಬಳಸಿದ ಗ್ರಾಮೀಣ ಭಾಷೆ ತುಂಬಾ ಆಕರ್ಷಣೀಯಿಂದ ಕೂಡಿದೆ. ಇದು ಗ್ರಾಮೀಣ ಭಾಗದ ಅವಿದ್ಯಾವಂತರ ಭಾಷೆಗೆ ಸಮೀಪವಾದ ಭಾಷೆಯಾಗಿದೆ. 'ಉದಾಃ 'ಲೇ ಯಪ್ಪಾ, ಅನಕಾತ ನೀ ಏನೂ ತೋರಸಾಕ ಹೋಗಬ್ಯಾಡ್ಲೆ', 'ಲೇ ಮಗನ, ನೆಟ್ಟಿಗ ಕುಂಡಿ ತೊಳಕೊಳ್ಳಾಕ ಬರಲೆದ್ಕಿಲ್ಲ ನಿನಗ' ಎಂಬ ಗ್ರಾಮೀಣ ಭಾಷೆಯನ್ನು ನೋಡಹುದು[೧೪].

ಇವರ ನಾಟಕ ಶೈಲಿಯಲ್ಲಿ ಅನೇಕ ನಾಡ ನುಡಿಗಳನ್ನು ಬಳಸಿಕೊಂಡಿದ್ದಾರೆ. "ಅದಲು ಬದಲು ಕಂಚೀ ಬದಲು ಅವರು ಬಿಟ್ಟು ಇವರ್‍ಯಾರು" ಎಂಬ ವಿಚಾರವಾಗಲೀ 'ನೀ ಸತ್ತಾಂಗ ಮಾಡು

---

೧೩. ಮೂರು ಬೀದಿ ನಾಟಕಗಳು ಡಾ. ಬಸವರಾಜ ಸಬರದ (ಪ್ರಕಾಶಕರ ನುಡಿ) ಪುಟ–೧.

೧೪. ಮೂರು ಬೀದಿ ನಾಟಕಗಳು ಡಾ. ಬಸವರಾಜ ಸಬರದ (ಪ.ಕಾಶಕರ ನುಡಿ) ಪುಟ–೫.

ನಾ ಅತ್ತಾಂಗ ಮಾಡತೇನಿ[೧೫] ಎಂಬುವುದು ಗ್ರಾಮೀಣ ಜನರಿಗೆ ಹೇಳುವ ವಿಷಯ ಸರಳವಾಗಿ ಅರ್ಥವಾಗುವಂತೆ ಹೇಳಿದ್ದಾರೆ. ಜಾತಿ ಧರ್ಮಗಳ ಮಧ್ಯೆ ಇಂದಿನ ರಾಜಕೀಯ ವ್ಯಕ್ತಿ ಬೇಕಂತಲೆ ಮುಗಿದ ವಿಷಯಗಳನ್ನು ಕೆದರಿ ತೆಗೆಯುವಂತಹ ಕೆಲಸಕ್ಕೆ ಕೈ ಹಾಕುವುದು ಕೂಡ ನಾಟಕದಲ್ಲಿ ಕಂಡು ಬಂದಿದೆ. ನಾಟಕದಲ್ಲಿ ಮೀಸಲಾತಿ ವ್ಯವಸ್ಥೆಯನ್ನು ಯಾವ ರೀತಿ ಜನ ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಾರೆ ಮತ್ತು ಮುಗ್ದ ಜನರನ್ನು ಯಾವ ರೀತಿಯಿಂದ ಶೋಷಿಸುತ್ತಾ ಹೋಗುತ್ತಾರೆ ಎಂಬುವುದನ್ನು ತಿಳಿಸಿಕೊಡುತ್ತದೆ. ಜನರ ಬದುಕಿನ ಅತೀ ಹತ್ತಿರದ ಚಿತ್ರಣವನ್ನು ನೀಡಿ, ಪರಿಣಾತ್ಮಕವಾದ ಪ್ರಭಾವ ಬೀರುವಂತಹದ್ದು, ಕಂಡು ಬಂದಿದೆ. ಜನರು ತಾವೇ ಜಾಗೃತರಾಗಿ ವ್ಯವಸ್ಥೆಯನ್ನು ಸುಧಾರಿಸಿಕೊಳ್ಳುವ ಪ್ರಯತ್ನ ಅವರಾದಗಲೀ ಎಂಬ ಸದ್ ಉದ್ದೇಶವನ್ನು ಈ ನಾಟಕ ಹೊಂದಿದೆ.

ಗ್ರಾಮೀಣ ಜನರ ನೆಮ್ಮದಿಯ ಬದುಕಿನಲ್ಲಿ 'ರಾಮಭಟ್ಟ'ರಂತ ದುಷ್ಟ ಶಕ್ತಿಗಳು ತಮ್ಮ ಸ್ವಾರ್ಥ ಬುದ್ಧಿಗಾಗಿ ಮುಗ್ದ ಜನರ ಬದುಕನ್ನು ಹಾಳು ಮಾಡುವ ಪ್ರಯತ್ನ ಮಾಡುತ್ತಿವೆ. ಅದಕ್ಕೆ ಜನ ಅದನ್ನು ಗಮನಿಸಿ ಅದರಿಂದ ಜಾಗೃತ ಹೊಂದಬೇಕು ಮತ್ತು ವಿದ್ಯೆ ಇಲ್ಲದೇ ಇದ್ದಂತಹ ಸಂದರ್ಭದಲ್ಲಿ ಅವನು ಹೇಗೆ ಅಸಹಾಯಕನಾಗಿರುತ್ತಾನೆ ಎಂಬುವುದು ಬೇರೆಯವರು ಹೇಳಿದ್ದೆಲ್ಲವನ್ನು ನಂಬಿ ತಾನು ಮೋಸ ಹೋಗುವುದರೊಂದಿಗೆ ಶಿಕ್ಷೆಗೆ ಗುರಿಯಾಗುತ್ತಾನೆ. "ಶೋಷಿತರ ಸೌಲಭ್ಯಕ್ಕಾಗಿ ಇರುವ ನಿಯಮಗಳನ್ನು ಮೇಲ್ವರ್ಗದವರು ಅದರ ದುರುಪಯೋಗ ಪಡಿಸಿಕೊಳ್ಳುವುದರ ಬಗ್ಗೆ ಈ ನಾಟಕದಲ್ಲಿ ಸಮರ್ಥವಾಗಿ ಚಿತ್ರಿಸಲ್ಪಟ್ಟಿದೆ. ಅನಕ್ಷರತೆ, ಅಮಾಯಕತೆ ಇಂತಹ ಶೋಷಣೆಗೆ ಸಹಾಯಕವಾಗಿರುವ ಅಂಶಗಳೆಂಬುವುದು ಈ ನಾಟಕದಿಂದ ಬೆಳಕಿಗೆ ಬಂದಿದೆ".

**ಹನುಮಾಯಣ ನಾಟಕದ ಪಾತ್ರಗಳು:**

ಹನುಮಾಯಣ ನಾಟಕದಲ್ಲಿ ಪ್ರಮುಖವಾದ ಪಾತ್ರಗಳು ಸೂತ್ರಧಾರ, ನಟ, ಹನುಮಂತರಾವ, ರಾಮಭಟ್ಟ, ಬಸವಂತ, ಚೌಡಾಂಬಿಕ, ಯುವಕ, ಪೊಲೀಸ, ಮೇಳ, ಗುಂಪು ಹೀಗೆ ಪಾತ್ರಗಳು ತಮ್ಮ ತಮ್ಮ ಕಾರ್ಯ ವೈಖರಿಗಳ ಬಗ್ಗೆ ವಿಚಾರ ವ್ಯಕ್ತಪಡಿಸುತ್ತವೆ. ಸೂತ್ರಧಾರ, ನಾಟಕಗಳ ಪಾತ್ರಗಳು, ಯಾವ ರೀತಿ ಕೆಲಸ ಮಾಡುತ್ತವೆ, ಮೇಳದವರು ಸಂದರ್ಭಕ್ಕೆ ತಕ್ಕಂತೆ

---

೧೫. ಮೂರು ಬೀದಿ ನಾಟಕಗಳು ಡಾ. ಬಸವರಾಜ ಸಬರದ ಪುಟ-೬.

ಹಾಡು ಹೇಳುವಂತದ್ದು, ಉಳಿದ ಪಾತ್ರಗಳು ಒಂದಕ್ಕೊಂದು ಸಂಬಂಧ ಕಲ್ಪಿಸಿ ಹೇಳುವಂತದ್ದು ಈ ನಾಟಕದಲ್ಲಿ ಕಂಡು ಬರುತ್ತದೆ.

**ಭಾಷೆ:**

ಈ ನಾಟಕದಲ್ಲಿ ಗ್ರಾಮೀಣ ಭಾಗದ ಅನಕ್ಷರಸ್ಥರ ಭಾಷೆಯನ್ನು ಕಾಣಬಹುದಾಗಿದೆ. ಭಾಷೆಯಲ್ಲಿ ಪಾತ್ರಗಳಿಗೆ ಅನುಗುಣವಾದ ಭಾಷೆಯನ್ನು ಬಳಸಿದ್ದು, ಓದುಗರಿಗೆ ಈ ನಾಟಕ ತುಂಬಾ ಆಕರ್ಷಣೆಯಿಂದ ಕೂಡಿದೆ.

**ರಂಪಾಯಣ**

ಬೀದಿ ನಾಟಕದಲ್ಲಿ ರಾಜಕೀಯ ವ್ಯಕ್ತಿಗಳು ಸಮಾಜವನ್ನು ಹೇಗೆ ಒಡೆದು ಆಳುವ ರೀತಿಯನ್ನು ಇದರಲ್ಲಿ ಕಂಡು ಬಂದಿದೆ. ಹಿಂದು ಮತ್ತು ಮುಸ್ಲಿಂ ಬಾಂಧವರ ಮಧ್ಯೆ ಜಗಳ ಹಚ್ಚುವ ಮತ್ತು ಅದರಿಂದ ಅವರು ಅಧಿಕಾರದಲ್ಲಿ ಮುಂದುವರೆಯುವ ನೀತಿಯನ್ನು ತಿಳಿಸುತ್ತದೆ. ಗುರುಶಿಷ್ಯರ ಪಾತ್ರಗಳು ಈ ನಾಟಕದಲ್ಲಿ ಚರ್ಚಾತ್ಮಕವಾಗಿರುವ ವಿಷಯಗಳು ತುಂಬಾ ಮಹತ್ವಪೂರ್ಣವಾದ ಮತ್ತು ಸೂಕ್ಷ್ಮವಾದ ವಿಚಾರಗಳಿಂದ ತುಂಬಿವೆ.

ಇಂದಿನ ಸಾಮಾಜಿಕ ಬದುಕಿನಲ್ಲಿಯೂ ಗುರು ಶಿಷ್ಯರ ಸಂಬಂಧ ಹೇಗೆ ಬೆಳೆದಿದೆ. ಅದರ ಪರಿಣಾಮ ಎಷ್ಟಾಗಿದೆ ಎಂಬುವುದು ನೋಡಬಹುದು. ಸಮಾಜಕ್ಕೆ ಮಾರ್ಗ ಮಾಡುವಂತಹ ಗುರು ಶಿಷ್ಯನಿಗೆ ಬುದ್ಧಿವಾದ ಹೇಳಬೇಕು. ಆದರೆ ಶಿಷ್ಯ ಗುರಿವಿನೊಂದಿಗೆ ಸರಾಯಿ ಕುಡಿದ ಅಮಲಿನಲ್ಲಿ ಇಬ್ಬರು ಯಾವುದೇ ವ್ಯತ್ಯಾಸ ಗೌರವವಿಲ್ಲದೇ ಇರುವಂತಹದ್ದು, ಕಂಡು ಬರುತ್ತದೆ. ಗುರು ಶಿಷ್ಯರು ಮಂತ್ರಿಯ ಪರಿಚಯವನ್ನು ಹಾಡಿನ ರೂಪದಲ್ಲಿ ಮಾಡಿರುವುದು ತುಂಬಾ ಆಕರ್ಷಣೆಯಿಂದ ಕೂಡಿದೆ.

ವರಕವಿ ಡಾ. ದ.ರಾ. ಬೇಂದ್ರೆಯವರ ಹಾಡಾದ 'ಯ್ಯಾಕ ಇನ್ನೂ ಬರಲಿಲ್ಲವ ಹುಬ್ಬಳ್ಳಿಯವ, ವಾರಕ್ಕೊಂದು ಸಲ ಬಂದು ಹೋಗವಾ' ಎಂಬ ಹಾಡಿನ ಧಾಟಿಯಲ್ಲಿ ಇಂದಿನ ಮಂತ್ರಿಗಳ ಕೆಟ್ಟ ಗುಣಗಳನ್ನು ಬಯಲಿಗೆ ತರುವಂತದ್ದು, ರಾಜಕೀಯಕ್ಕೆ ಬರುವ ವ್ಯಕ್ತಿಗಳ ಎಂತಹ ಸ್ಥಿತಿಗೆ ಇಳಿದಿದ್ದಾರೆ. ಹಣ ಕೊಟ್ಟು ಓಟು ಪಡೆದು, ಜನಪರ ಕೆಲಸ ಮಾಡದೇ ಜನರಿಗೆ ಮೋಸ ಮಾಡುವಂತದ್ದು ಈ ನಾಟದಲ್ಲಿ ಕಂಡು ಬಂದಿದೆ. ಓಟು ನೀಡುವಂತಹ ಪ್ರಜೆಗಳಿಗೆ

ಎಚ್ಚರಿಸುವಂತಹ ಕೆಲಸ ಈ ನಾಟಕ ಮಾಡಿದೆ. ಈ ಹಾಡಿನಲ್ಲಿ ಇಡೀ ರಾಜಕೀಯ ವ್ಯಕ್ತಿಗಳ ಚರಿತ್ರೆ ತುಂಬಿದೆ ಎಂದರು ತಪ್ಪಾಗಲಾರದು.

"ಸಿಮೆಂಟ್ ನುಂಗಿ

ಕಬ್ಬಿಣ ತಿಂದು ಅರಗಿಸಿಕೊಂಡವ"

"ಕಾಡು ನುಂಗಿ ನಾಡು ತಿಂದು, ಬೀರ್ ಕುಡುದಾವ"

'ಜನತಾ ಮನಿ ಕುಡ್ತೇನಂತ ಜನರನ್ನು ಸುಲುದಾವ

ತನ್ನ ಮನಿ ದೊಡ್ಡದ ಮಾಡಿ ಮಹಲ್ ಕಟ್ಟಿದಾವ [(೧೬)]

ಎಂಬ ಪದ್ಯಗಳು ಜನಪರ ಕೆಲಸ ಮಾಡಲು ಸರಕಾರ ಯೋಜನೆಗಳು ಹೇಗೆ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡಿದ್ದಾನೆ ಎಂಬುವುದು ಸ್ಪಷ್ಟಪಡಿಸುತ್ತದೆ. ಈ ನಾಟಕ ಇಂದಿನ ಸಮಾಜದ ಪರಿವರ್ತನೆಗೆ ಯುವಕರ ಪಾತ್ರ ಬಹಳ ಮುಖ್ಯವಾದದ್ದು ಎಂಬ ವಿಚಾರ ಸ್ಪಷ್ಟಪಡಿಸುತ್ತದೆ. ಶಿಕ್ಷಣ ಪಡೆದ ಯುವಕರಿಂದ ಸಮಾಜದ ಏಳಿಗೆ ಮತ್ತು ಮೂಢನಂಬಿಕೆ, ಒಡೆದಾಳುವ ಪದ್ಧತಿ, ಜಾತಿ ಜಾತಿಯಲ್ಲಿ ವೈರತ್ವ ಮೂಡಿಸುವಂತ ವ್ಯವಸ್ಥೆಗಳು ಫಲ ನೀಡುವುದಿಲ್ಲ ಎಂಬ ಅಭಿಪ್ರಾಯ ಏನಿದ್ದರೂ ಅಭಿವೃದ್ಧಿ ಮಾತ್ರ ಕಾಣಬಹುದು ಎಂಬ ವಿಚಾರ ಈ ನಾಟಕದಲ್ಲಿ ಕಂಡು ಬರುತ್ತದೆ. 'ತಮ್ಮ ಸ್ವಾರ್ಥ ಸಾಧನೆಗೆ ಬ್ರಿಟಿಷರು ಒಡೆದಾಳುವ ನೀತಿಯನ್ನು ನಮ್ಮ ರಾಜಕಾರಣಿಗಳು ಮುನ್ನಡೆಸಿಕೊಂಡು ಬಂದಿದ್ದನ್ನು ಈ ನಾಟಕದಲ್ಲಿ ಕಂಡು ಬಂದಿದೆ. ಜನರನ್ನು ಉದ್ದೇಶಿಸಿ ನಾಲ್ಕು ಮಾತಾಡಲು ಆಗದ ವ್ಯಕ್ತಿ ಜನನಾಯಕನಾಗುವ ವಿಪರ್ಯಾಸ ಇಲ್ಲಿದೆ. ಕೋಮು ಗಲಭೆಗಳನ್ನು ಪ್ರಚೋದಿಸುತ್ತ ಈ ಮೂಲಕ ತಮ್ಮ ಬೆಳೆ ಬೇಯಿಸಿಕೊಳ್ಳುವ ರಾಜಕಾರಣಿಗಳು ಇಲ್ಲಿದ್ದಾರೆ [(೧೭)].

ಈ ನಾಟಕದ ಕೊನೆಯ ಭಾಗದಲ್ಲಿ ಹಿಂದೂ ಧರ್ಮದ ಧರ್ಮ ಗುರುಳಾದ ಸ್ವಾಮಿಗಳು ಎಂತಹ ಐಶ್ವರ್ಯ ಮತ್ತು ವೈಭವ ಪೂರಿತ ಜೀವನ ನಡೆಸುತಿದ್ದಾರೆ. ಅವರ ಬೆಂಬಲಿಗರಾಗಿ ಅವರದೇಯಾದ ವ್ಯಕ್ತಿಗಳು ಅವರ ಬೆಂಬಲವಾಗಿ ನಿಂತು ಸ್ವಾಮಿಗಳ ಬಗ್ಗೆ ಹೊಗಳುವಂತದ್ದು, ಮತ್ತು ಸ್ವಾಮಿಗಳು ರಾಜಕೀಯ ಇಚ್ಛಾಶಕ್ತಿ ಅಧಿಕಾರಿಗಳನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟಿಕೊಂಡಿರುವಂತಹ ವಿಚಾರ ಇಲ್ಲಿ ಮೂಡಿಬಂದಿದೆ.

---

೧೬. ಮೂರು ಬೀದಿ ನಾಟಕಗಳು ಡಾ. ಬಸವರಾಜ ಸಬರದ ಪುಟ-೪೧.

೧೭. ಸುದ್ದಿಮೂಲ - ಎಂ.ಕೆ. ಜೋಷಿ, ದಿನಾಂಕಃ ೩-೯-೧೯೯೫.

**ರಂಪಾಯಣ ನಾಟಕದ ಪಾತ್ರಗಳು:**

ಈ ರಂಪಾಯಣ ನಾಟಕದಲ್ಲಿ ಪ್ರಮುಖವಾಗಿ ಬರುವಂತಹ ಪಾತ್ರಗಳು ಗುರು, ಶಿಷ್ಯ, ಮಂತ್ರಿ, ಪುಡಾರಿ, ವ್ಯಕ್ತಿ, ಧರ್ಮರಕ್ಷಣಾ ಕಾರ್ಯದರ್ಶಿ, ಪುಡಪಿ ಪೇಜಾವರ, ಸತ್ಯ, ನಾಯಿ ಬಾಬಾ, ಪುರಿ ಚಟ್ನಿ ಸ್ವಾಮಿ, ಬೃಂಗೇರಿ ಜಗದ್ಗುರು, ಚಡ್ಡಿ, ಯುವಕ, ಸಭಿಕರು, ಭಕ್ತರು ಹೀಗೆ ಈ ಪಾತ್ರಗಳೆಲ್ಲವು ತಮ್ಮ ಸಂಭಾಷಣೆಯಿಂದ ಚರ್ಚಾತ್ಮಕವಾದ ವಿಚಾರಗಳ ಮೂಲಕ ಪ್ರೇಕ್ಷಕರಿಗೆ ಮನೋರಂಜನೆ ಜೊತೆಗೆ ಮಾರ್ಗದರ್ಶನವೂ ಮಾಡುವಂತದ್ದು ಕಂಡು ಬರುತ್ತದೆ.

**ಭಾಷೆ:**

ಈ ನಾಟಕದ ಭಾಷೆ ಗ್ರಾಮೀಣ ಭಾಗದ ಭಾಷೆ ಇದ್ದು, ಓದುಗರಿಗೆ ಅರ್ಥವಾಗುವ ರೀತಿಯಲ್ಲಿ ಬಳಸಿದ್ದಾರೆ. ಕೆಲವು ಕಡೆ ಭಾಷೆ ಬಿಗುವಿನಿಂದ ಕೂಡಿದೆ. ಮತ್ತು ಸರಳವಾದ ಭಾಷೆಯಲ್ಲಿ ಗೀತೆಯ ಅಂಶಗಳನ್ನು ಕಂಡು ಬರುತ್ತವೆ.

**ರೇಣುಕಾ ಮೇಡಮ್**

ಈ ನಾಟದ ಡಾ. ಬಸವರಾಜ ಸಬರದರ ಮೂರನೇ ಬೀದಿ ನಾಟಕವಾಗಿದೆ. ನಾಟಕದ ಪ್ರಾರಂಭ ಹಾಡಿನೊಂದಿಗೆ ಪ್ರಾರಂಭವಾಗಿ ಮೂಢನಂಬಿಕೆಯಲ್ಲಿರುವ ಜನರ ಬದುಕನ್ನು ಜಾಗೃತ ಮಾಡುವಂತಹ ಪ್ರಯತ್ನವಾಗಿದೆ. ಈ ನಾಟಕದಲ್ಲಿ ಪೂಜಾರಿಯು ಜನರ ಸಮಸ್ಯೆಗಳಿಗೆ ಎಲ್ಲವ್ವ ನೀನೇ ಕಾರಣವೆಂದು ಜನರು ಹೇಳಿದಾಗ ಅದಕ್ಕೆ ನೀವು ಮಾಡಿದ ತಪ್ಪಿಗೆ ನೀವೇ ಪಶ್ಚಾತಾಪ ಪಡಿರಿ ಎಲ್ಲಿ ಯಾವ ದೇವ ದೇವತೆಗಳು ಬಸವಿ ಬಿಡ್ರಿ ಎಂದು ಹೇಳಿಲ್ಲ. ರೋಗ ರುಜುವೆಗೆ ತುತ್ತಾಗುವಂತೆ ಮಾಡಿಲ್ಲ. ಅದು ಜನರ ಮೂಢನಂಬಿಕೆ ತಿಳುವಳಿಕೆಗೆ ವಿದ್ಯಾಜ್ಞಾನ ಇಲ್ಲದ ಕಾರಣ ಇಂತಹ ಸಮಸ್ಯೆಗೆ ಬೀಳುವುದು ಕಂಡು ಬಂದಿದೆ.

ಇಂದಿನ ಮೂಢನಂಬಿಕೆಯಿಂದ ದೂರ ಮಾಡಿ ಜನರಿಗೆ ಆರೋಗ್ಯಕರವಾದ ಉತ್ತಮ ಜೀವನ ನಡೆಸಬಲ್ಲಂತೆ ಈ ಆಧುನಿಕ ರೇಣುಕಾ ಮೇಡಮ್ ಸಲಹೆ ಮಾಡುತ್ತಾಳೆ. ಆಧುನಿಕ ಸಮಾಜದಲ್ಲಿ ಮೂಢನಂಬಿಕೆ ಇಲ್ಲ ನೀವು ಸಮಯಕ್ಕೆ ತಕ್ಕಂತೆ ಚುಚ್ಚು ಮದ್ದುಗಳನ್ನು ಔಷಧ ತೆಗೆದುಕೊಂಡರೆ ಶುದ್ಧ ನೀರು, ಶುದ್ಧ ಆಹಾರ ಸೇವಿಸಿದರೆ ಮಕ್ಕಳಿಗೆ ಮತ್ತು ನಿಮಗೆ ಯಾವುದೇ

ರೋಗ ರುಜುವಿಗಳು ಬರುವುದಿಲ್ಲ. ಚಿಕ್ಕ ಮಕ್ಕಳಿಗೆ ಪ್ರಾರಂಭದಲ್ಲಿ ಬಿ.ಸಿ.ಜಿ. ಚುಚ್ಚು ಮದ್ದು ಕುಡಿಸುವುದರಿಂದ ರೋಗಮುಕ್ತವಾಗಿ ಮಕ್ಕಳು ಬದುಕುತ್ತಾರೆಂಬ ಸಲಹೆ ನೀಡುತ್ತಾಳೆ.

'ಈ ನಾಟಕದಲ್ಲಿ ಬಸವಿ ಬಿಡುವಂತ ಅಮಾನವೀಯ ಅರ್ಥಹೀನ ಆಚರಣೆಯ ವಿರುದ್ಧ ರೇಣುಕಾ ಮೇಡಮ್ ಎಂಬ ಪಾತ್ರ ಧ್ವನಿ ಎತ್ತುತ್ತದೆ. ವೇಷಾವೃತ್ತಿಯನ್ನು ಧಾರ್ಮಿಕ ಮುದ್ರೆಯೊಂದಿಗೆ ನಡೆಸುವ ಹುನ್ನಾರವಾಗಿ ಬಂದ ಬಸವಿ ಎಂತಹ ಪದ್ಧತಿಗಳಿಗೆ ಅನೇಕ ಅನಕ್ಷರಸ್ಥರು, ಮುಗ್ಧ ಸ್ತ್ರೀಯರು ಬಲಿಯಾಗುತ್ತಾ ಬಂದಿದ್ದಾರೆ. ದೈವಿ ಶಕ್ತಿಯ ಭೀತಿಗೆ ಒಳಗಾಗಿ ಇಂತಹ ಆಚರಣೆಗಳು ನಡೆಯುತ್ತಾ ಹೋಗುತ್ತವೆ. ಇಂತಹ ಆಚರಣೆಯಲ್ಲಿನ ಅರ್ಥಹೀನತೆಯನ್ನು ಈ ನಾಟಕ ಅತ್ಯಂತ ಸಮರ್ಥ ರೀತಿಯಲ್ಲಿ ವಿಡಂಬನಾತ್ಮಕವಾಗಿ ಎತ್ತಿ ಹಿಡಿಯುತ್ತದೆ'[೧೮].

ಒಟ್ಟಿನಲ್ಲಿ ಈ ನಾಟಕವು ಜನರ ಮಧ್ಯೆ ಹುಟ್ಟಿ ಜನರ ಸಮಸ್ಯೆಗಳನ್ನೇ ವಸ್ತುವಾಗಿ ಆಯ್ಕೆ ಮಾಡಿ ಅದಕ್ಕೆ ಉತ್ತಮ ರೀತಿಯ ಪರಿಹಾರ ಮತ್ತು ಜನಜಾಗೃತ ಮಾಡುವ ನಿಟ್ಟಿನಲ್ಲಿ ನಾಟಕ ಮೂಡಿಬಂದಿದೆ. ಸಮಾಜದ ಕಳಕಳಿ ಹೊಂದಿದ್ದ ಈ ನಾಟಕ ಜನರ ಸಮಸ್ಯೆಗಳು, ದುಃಖಗಳು ಹಾಗೂ ಮುಗ್ಧ ಸ್ವಭಾವದ ಬಗ್ಗೆ ಅರಿವಿದ್ದು, ಅವರು ಇದನ್ನು ನಿರ್ಮೂಲ ಮಾಡುವಲ್ಲಿ ಆಧುನಿಕವಾದ ಸಲಹೆಗಳ ಮುಖಾಂತರ ಸಮಾಜಕ್ಕೆ ಮಾರ್ಗದರ್ಶನ ನೀಡಿದೆ. ಇದು ಒಂದು ಸಾಮಾಜಿಕ ಪರಿವರ್ತನೆ ನಾಟಕವಾಗಿ ಜನರ ಮನಸ್ಸು ಗೆದ್ದಿದೆ. ಸಮಾಜ ಅನಕ್ಷರಸ್ಥ ಜನರ ಪರಿವರ್ತನೆಗೆ ಈ ನಾಟಕ ಒಂದು ನಿದರ್ಶನವಾಗಿದೆ.

**ರೇಣುಕಾ ಮೇಡಮ್ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳು ಇಂತಿವೆ. ಪೂಜಾರಿ, ಹೆಣ್ಣು ಜೋಗತಿ-೧, ಹೆಣ್ಣು ಜೋಗತಿ-೨, ಗಂಡು ಜೋಗತಿ-೧, ಗಂಡು ಜೋಗತಿ-೨, ರೇಣುಕಾ ಮೇಡಮ್, ಭಕ್ತರು, ಮೇಳ ಇವು ಪ್ರಮುಖ ಪಾತ್ರಗಳಾಗಿವೆ.

**ಭಾಷೆಃ**

ಈ ನಾಟಕದ ಭಾಷೆ ಗ್ರಾಮೀಣ ಜನರ ಆಡುವ ಭಾಷೆಯಾಗಿದ್ದು, ರೇಣುಕಾ ಮೇಡಮ್ ಇವಳ ಭಾಷೆ ಅಕ್ಷರಸ್ಥರ ಭಾಷೆಯಾಗಿದೆ. ಇದರಲ್ಲಿ ಗ್ರಾಮೀಣ ಜನರ ಭಾಷೆಗೆ ಉತ್ತಮ ಉದಾಹರಣೆಯಾಗಿ, ಹಣ್ಯಾಗ ಕುಂಕುಮಿಲ್ಲ, ಕೈಯಾಗ ಬಳಿ ಇಲ್ಲ. ಇದೇನ ತಾಯಿ?

ಈ ಲಿಪ್‌ಸ್ಟಿಕ್ ಹಚ್ಚಲಾಕ ಯಾವಾಗ ಸುರು ಮಾಡಿದ್ಯಾ ತಾಯಿ? ಎಂಬ ಭಾಷೆ ಈ ನಾಟಕದಲ್ಲಿ ಆಕರ್ಷಣೆಯಾಗಿ.

ಡಾ. ಬಸವರಾಜ ಸಬರದರ ನಾಲ್ಕು ಬೀದಿ ನಾಟಕಗಳು ಇದು ಅವರ ಎರಡನೇ ಬೀದಿ ನಾಟಕದ ಕೃತಿಯಾಗಿದೆ. ಇದರಲ್ಲಿ ಹುಲಿಗೆಮ್ಮಾ, ಎಲೆಮರೆಯ ಹೂಗಳು, ಹನುಮನಾಯಕ, ಮತ್ತು ಸಾಲದ ಹೆಣ, ಎಂಬ ನಾಟಕಗಳು ಒಳಗೊಂಡಿವೆ. ಈ ಎಲ್ಲಾ ನಾಟಕಗಳು ಸಮಾಜದ ಪ್ರಸ್ತುತ ಪರಿಸ್ಥಿತಿಯಲ್ಲಿ ಮನುಷ್ಯ ಹೇಗೆ ಬದುಕುತ್ತಿದ್ದಾನೆ. ಅವನು ಎಲ್ಲಾ ದುಷ್ಟ ವ್ಯವಸ್ಥೆಯ ಜೊತೆಗೆ ಹೇಗೆ ಹೊಂದಾಣಿಕೆ ಮಾಡಿಕೊಂಡು, ಬದುಕುತ್ತಿದ್ದಾನೆ ಎಂಬುವುದು ಈ ನಾಟಕದಲ್ಲಿ ಚಿತ್ರಿತವಾಗಿದೆ. ಮತ್ತು ಅದಕ್ಕೆ ಪರಿಹಾರವಾಗಿ ಜನಜಾಗೃತಿ ಮೂಡಿಸುವ ಸಾಕ್ಷರತಾ ಆಂದೋಲನದ ವಿಚಾರಗಳು ಇದರಲ್ಲಿ ಕಂಡು ಬಂದಿವೆ.

## ನಾಲ್ಕು ಬೀದಿ ನಾಟಕಗಳು

### ಹುಲಿಗೆಮ್ಮ

ಹುಲಿಗೆಮ್ಮ ನಾಟಕದ ಪ್ರಾರಂಭ ಪ್ರಕೃತಿ ಸೌಂದರ್ಯದಿಂದ ಕೂಡಿದೆ. ಹೊಳೆಯ ಹಳ್ಳ, ಹುಣ್ಣಿಮೆಯ ಚಂದ್ರನ ಬೆಳದಿಂಗಳು ಆಕರ್ಷಣೀಯವಾಗಿದೆ. ನಾಟಕದಲ್ಲಿ ಹುಲಿಗೆಮ್ಮನ ಹಸುವಿನ ಭೀಕರತೆ, ಹಸಿದ ವ್ಯಕ್ತಿಗೆ ಎಂತಹ ಕೆಲಸ ಮಾಡಲು ಸಿದ್ಧ ಎಂಬುವುದು ಈ ನಾಟಕದಿಂದ ಮನವರಿಕೆಯಾಗುತ್ತದೆ. ಹುಲಿಗೆಮ್ಮನ ಪೂಜಾರಿ ಮುಗ್ದ ಜನರನ್ನು ಹೆದರಿಸಿ ಅದರಿಂದ ಲಾಭ ಪಡೆಯುವಂತೆ ಹವಣಿಸುತ್ತಾನೆ. ಜಾತ್ರಿ ಮಾಡಬೇಕು, ಬಲಿ ಕೊಡಬೇಕು, ಬಸವಿ ಬಿಡಬೇಕು ಎಂಬ ವಿಚಾರಕ್ಕೆ ವಿದ್ಯಾವಂತ ಜನರು ಅದನ್ನು ವಿರೋಧಿಸಿ, ತಡೆದಂತಹ ವಿಚಾರ ಕಂಡು ಬರುತ್ತದೆ. ಮುಗ್ದವಾದ ಗ್ರಾಮೀಣ ಹುಡುಗಿಗೆ ಅವಳು ಶಾಲೆಗೆ ಹೋಗುವ ವಯಸ್ಸಿನಲ್ಲಿ ಬಸವಿ ಬಿಡುವಂತದ್ದು, ಈ ವ್ಯವಸ್ಥೆಯ ವಿರುದ್ಧವಾಗಿ ಶಿಕ್ಷಕರು ತಿಳಿಹೇಳುವಂತದ್ದು ಕಂಡು ಬರುತ್ತದೆ.

ಈ ನಾಟಕದಲ್ಲಿ ಆಧುನಿಕ ಹುಲಿಗೆಮ್ಮ ಗ್ರಾಮ ಸಭೆ ಕರೆಯಿಸಿ, ಎಲ್ಲಾ ವರ್ಗದ ಸಮಾಜದ ಮುಖಂಡರನ್ನು ಜವಾಬ್ದಾರಿ ಇರುವ ವ್ಯಕ್ತಿಗಳಾದ ಗೌಡ, ಕುಲಕರ್ಣಿ, ಮಾಸ್ಟರ, ಪೂಜಾರಿಗೆ ಕರೆಯಿಸಿ, ಅವರಿಗೆ ಆಧುನಿಕವಾದ ಕಾನೂನಿನ ಪ್ರಕಾರ ಸಲಹೆ ಮಾಡಿ, ಅವರಿಗೆ ದಾರಿ ತಪ್ಪದಂತೆ ಎಚ್ಚರಿಕೆ ನೀಡುತ್ತಾಳೆ. ಇದು ನಾಟಕದ ಒಂದು ಒಳತಂತ್ರಗಾರಿಕೆಯಾಗಿ ಕಂಡು ಬಂದಿದೆ. ಕೊನೆಯ ಹಂತದಲ್ಲಿ ಗ್ರಾಮದ ಎಲ್ಲಾ ಜನರು ಈ ಹುಲಿಗೆಮ್ಮಳಿಗೆ ಭಾಷೆ ಕೊಡುತ್ತಾರೆ. ನಮ್ಮ ಮಕ್ಕಳಿಗೆ ಶಿಕ್ಷಣ

ಕೊಡಿಸುತ್ತೇವೆ, ಮಕ್ಕಳಿಗೆ ಹೆಚ್ಚಿನ ಅಭ್ಯಾಸ ಮಾಡಿಸುತ್ತೇವೆ, ಅವರಿಗೆ ಸಮಾಜದಲ್ಲಿ ಗೌರವವಾಗಿ ಬಾಳುವಂತೆ, ಬದುಕುವಂತೆ ನೋಡಿಕೊಳ್ಳುತ್ತೇವೆ ಎಂದು ವಿಶ್ವಾಸ ನೀಡುವಂತದ್ದು, ಇದು ನಾಟಕದ ಪರಿವರ್ತನೆಯ ಪ್ರಭಾವವನ್ನು ಕಾಣಬಹುದು.

**ಹುಲಿಗೆಮ್ಮ ನಾಟಕದ ಪಾತ್ರಗಳು:**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳು ಇಂತಿವೆ. ಪುಜಾರಿ, ಹೆಣ್ಣು ಜೋಗತಿ, ಗಂಡು ಜೋಗತಿ, ರೇಣುಕಾ ಮೇಡಮ್, ಭಕ್ತರು, ಮೇಳ, ಇಲ್ಲಿಯ ಪ್ರಮುಖ ಪಾತ್ರಗಳು. ಧಾರ್ಮಿಕ ವಿಚಾರ ಸಂಬಂಧಿಸಿದಂತೆ ಒಂದಕ್ಕೊಂದು ಪೂರಕವಾದ ಸಂಬಂಧವುಳ್ಳ ಪಾತ್ರಗಳು ಇಲ್ಲಿ ಕಂಡು ಬಂದಿವೆ. ರೇಣುಕಾ ಮೇಡಮ್‌ಳ ಪಾತ್ರ ಆಧುನಿಕವಾದ ವಿಚಾರದೊಂದಿಗೆ ಸಮಾಜಕ್ಕೆ ಮತ್ತು ಉಳಿದ ಎಲ್ಲಾ ಪಾತ್ರಗಳಿಗೆ ನೀತಿ ಪಾಠ ಹೇಳುವಂತಹದು ತುಂಬಾ ಪರಿಣಾತ್ಮಕವಾದ ಪಾತ್ರವಾಗಿದೆ.

**ಭಾಷೆ:**

ಈ ನಾಟಕದ ಭಾಷೆ ಹಳ್ಳಿಯ ಭಾಷೆಯಾಗಿದ್ದು, ದೇವಿಯ ಭಕ್ತರ ಭಾಷೆಯಾಗಿದೆ. ಇದರಲ್ಲಿ ಜೋಗತಿಯ ಭಾಷೆ ತುಂಬಾ ಆಕರ್ಷಣೆಯಿಂದ ಕೂಡಿದೆ. ಮೇಳದವರ ಭಾಷೆ, ಹಾಡಿನ ಧಾಟಿಯಲ್ಲಿರುವಂತದ್ದು, ಕಂಡು ಬರುತ್ತದೆ. ಇಲ್ಲಿಯ ರೇಣುಕಾ ಮೇಡಮ್ ಅವರ ಭಾಷೆ ಅಕ್ಷರ ಜ್ಞಾನ ಹೊಂದಿದದವರ ವ್ಯಕ್ತಿಯ ಭಾಷೆ ಇದೆ. ಸಾಹಿತ್ಯಿಕವಾದಂತ ವಿಚಾರಗಳು ಒಳಗೊಂಡ ಸರಳವಾಗಿ ಅರ್ಥವಾಗುವ ಭಾಷೆ ಇದೆ.

## ಎಲೆ ಮರೆಯ ಹೂಗಳು

ಈ ನಾಟಕ ಶಿಕ್ಷಣ ಮಟ್ಟ, ಗ್ರಾಮೀಣ ಶಿಕ್ಷಣದ ಪದ್ಧತಿ, ಗ್ರಾಮ ಶಿಕ್ಷಣ ಸಮಿತಿಯ ಕಾರ್ಯಗಳು ಶಿಕ್ಷಣ ತಜ್ಞರ ಜವಾಬ್ದಾರಿ, ವಿದ್ಯಾರ್ಥಿಗಳಲ್ಲಿ ಹುದುಗಿದ ಪ್ರತಿಭೆ, ಪ್ರಾಂತೀಯ ಭಾಷೆಗಳ ವ್ಯತ್ಯಾಸ, ಗ್ರಾಮೀಣ ಭಾಷೆಯಲ್ಲಿರುವ ಬಿಗುವು, ಗ್ರಾಮೀಣ ಪ್ರದೇಶದ ಅಚ್ಚಗನ್ನಡ ಪದಗಳು ಈ ನಾಟಕದಲ್ಲಿ ಕಂಡು ಬಂದಿದೆ. ಈ ನಾಟಕವನ್ನು ಸೂಕ್ಷ್ಮವಾಗಿ ಕಂಡಾಗ ಅನೇಕ ವಿಚಾರಗಳು ಸಲಹೆ ರೂಪದಲ್ಲಿ ಕಂಡು ಬರುತ್ತದೆ. ಭಾರತ ದೇಶದ ಶಿಕ್ಷಣವನ್ನು ಗಮನಿಸಿದಾಗ

ಎಷ್ಟೋ ಗ್ರಾಮೀಣ ಪ್ರದೇಶದಲ್ಲಿ ಮೂಲಭೂತವಾದ ಸೌಲಭ್ಯಗಳು ಕೊರತೆಗಳು ಇರುವಂತದ್ದು, ಕಂಡು ಬರುತ್ತದೆ.

ಎಷ್ಟೋ ಗ್ರಾಮಗಳಲ್ಲಿ ಶಾಲೆಗಳಿದ್ದರೂ ಮಕ್ಕಳಿಗೆ ಅನುಗುಣವಾಗಿ ಕೊಠಡಿಗಳಲಿಲ್ಲ. ಅವರಿಗೆ ಶಾಲಾಬಯಲಿನಲ್ಲಿ ಪಾಠ ಹೇಳುವ ಪರಿಸ್ಥಿತಿ ಇದೆ ಎಂಬುವುದು ಈ ನಾಟಕದಿಂದ ತಿಳಿದು ಬರುತ್ತದೆ. ಗ್ರಾಮೀಣ ಭಾಗದ ಮಕ್ಕಳಿಗೆ ಎಂತಹ ಶಿಕ್ಷಣವನ್ನು ನೀಡಬೇಕು ಎಂಬ ವಿಚಾರದಲ್ಲಿ ಪಠ್ಯ ಪುಸ್ತಕ ಸಮಿತಿಯವರು ಕೂಡಾ ಗಮನ ಹರಿಸಬೇಕು. ಬೆಳೆಯುವ ಮುಗ್ದ ಮಕ್ಕಳಲ್ಲಿ ತಾರತಮ್ಯದ ಶಿಕ್ಷಣದಿಂದ ಸಮಾಜ ದಾರಿ ತಪ್ಪುತ್ತದೆ ಎಂಬ ಭಾವನೆ ಮೂಡಿದೆ. ಸಮಿತಿ ಸದಸ್ಯರು ಪ್ರಕಟಿಸುವ ಪುಸ್ತಕ ಓದಿಸುವುದು ಶಿಕ್ಷಕರ ಜವಾಬ್ದಾರಿ ಎಂಬ ವಿಚಾರ ಮೂಡಿ ಬಂದಿದೆ. ಈ ನಾಟಕದಲ್ಲಿ ಪ್ರಾಂತೀಯ ಭಾಷೆ ಸಮಸ್ಯೆ ಬಂದಾಗ ಅದನ್ನು ತಿದ್ದಿಕೊಳ್ಳಲು ಕಲಿಯಲು ಅವಕಾಶವಿದೆ. ಅನ್ಯ ಬೇರೆ ಬೇರೆ ದೇಶದ ಭಾಷೆ ಕಲಿಯಲಿಕ್ಕೆ ಸಾಧ್ಯವಿದ್ದಾಗ ನಮ್ಮ ಪ್ರಾಂತೀಯ ಕನ್ನಡ ಭಾಷೆಯ ಹೇಗೆ ಸಾಧ್ಯವಿಲ್ಲ ಎಂಬಂತೆ ನಾಟಕ ಉತ್ತರಿಸುತ್ತದೆ. ಶಿಕ್ಷಕರು ಸ್ವಲ್ಪ ದಿವಸದಲ್ಲಿ ಪ್ರಾಂತೀಯ ಭಾಷಾವನ್ನು ಕಲಿಯುತ್ತಾರೆ. ಅಂದರೆ ಬೇರೆ ಬೇರೆ ಪ್ರಾಂತೀಯ ಭಾಷೆ ಸ್ಥಿತಿ ಕೂಡಾ ಇದರಿಂದ ಅವರಿಗೆ ತಿಳಿಯುತ್ತದೆ.

ಗ್ರಾಮೀಣ ಶಿಕ್ಷಣ ಸಮಿತಿಯವರು ಉತ್ತಮ ವಿಚಾರಗಳ ಬಗ್ಗೆ ಚರ್ಚೆ ಮಾಡಬೇಕು. ಅದು ಬಿಟ್ಟು ಯಾವುದೇ ಸಂಬಂಧವಿಲ್ಲದ ವಿಚಾರಕ್ಕೆ ಅವಕಾಶ ನೀಡಿ, ಹೊಸ ಸಮಸ್ಯೆಗಳಿಗೆ ಅನುವು ಮಾಡಬಾರದೆಂದು ಸಂದೇಶ ಈ ನಾಟಕದಿಂದ ಕಂಡು ಬರುತ್ತದೆ. ಶಿಕ್ಷಣ ತಜ್ಞರು ಕೂಡಾ ಸಾಕ್ಷರತಾ ಆಂದೋಲನದ ಅದರ ಕಾರ್ಯಗಳ ಬಗ್ಗೆ ವಿವರಿಸುಂತದ್ದು, ಶಿಕ್ಷಣ ಅಂದರೆ ಎಲ್ಲವೂ ಒಪ್ಪಿಕೊಳ್ಳುವಂತದ್ದಲ್ಲ. ಕಾಲ ಕಾಲಕ್ಕೆ ಪರಿಸ್ಥಿತಿಗಳು ಬದಲಾದಂತೆ ಪದ್ಧತಿಗಳು ಕೂಡಾ ಬದಲಾವಣೆ ತರಬೇಕೆಂದು ಶಿಕ್ಷಣ ತಜ್ಞರ ವಿಚಾರ ತುಂಬಾ ಮಹತ್ವದ್ದಾಗಿದೆ. ಗ್ರಾಮೀಣ ಪ್ರದೇಶದಲ್ಲಿರುವ ನಾಟಿ ವೈದ್ಯಕೀಯ ಚಿಕಿತ್ಸೆ ತುಂಬಾ ಪರಿಣಾತ್ಮಕವಾಗಿ ಮತ್ತು ಮಹತ್ವಪೂರ್ಣವಾಗಿದೆ. ಗ್ರಾಮದ ಜನರಿಗೆ ಅದು ಸಹಜ ಎಂಬಂತೆ ಎಲ್ಲಾ ಮಕ್ಕಳಿಗೂ ಪರಿಚಯವಾದ ಔಷಧ ಗಿಡ ಮೂಲಿಕೆಗಳು ಇರುವಂತದ್ದು ಕಂಡು ಬರುತ್ತದೆ. ಇದರಿಂದ ನಾಟಿ ಔಷಧ ಬಗ್ಗೆ ಹೆಚ್ಚಿನ ಸಂಶೋಧನೆಗೆ ಇಲ್ಲಿ ಅವಕಾಶಗಳು ಕಂಡು ಬರುತ್ತವೆ. ಎಷ್ಟೋ ವಿಷಯಗಳು ಹಿರಿಯರಿಗೆ ಗೊತ್ತಿರಲಾರದ ಔಷಧಗಳು ಮಕ್ಕಳಿಗೆ ಗೊತ್ತಿದೆ ಎಂದರೆ ಅದು ಆ ಪ್ರದೇಶ ಮಣ್ಣಿನ ಗುಣವೇ ಎಂದು ಹೇಳಬಹುದು.

**ಎಳೆ ಮರೆಯ ಹೂವುಗಳು ನಾಟಕದ ಪಾತ್ರಗಳು:**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳು ಶಿಕ್ಷಕ, ಶಿಕ್ಷಕಿ, ಗ್ರಾಮೀಣ ಶಿಕ್ಷಣ ಸಮಿತಿ, ಶಿಕ್ಷಣ ತಜ್ಞೆ, ವಿದ್ಯಾರ್ಥಿಗಳು ಪ್ರಮುಖ ಪಾತ್ರವಾಗಿದ್ದು ಈ ಎಲ್ಲಾ ಪಾತ್ರಗಳು ಶಿಕ್ಷಣದ ಕುರಿತು ಆರೋಗ್ಯಕರ ಚರ್ಚೆ ಮಾಡುವಂತದ್ದು ಕಂಡು ಬರುತ್ತದೆ. ಎಲ್ಲಾ ಪಾತ್ರಗಳು ಒಂದಕ್ಕೊಂದು ಸಂಬಂಧ ಕಲ್ಪಿಸಿಕೊಂಡು ವಿಷಯವನ್ನು ಮುಂದುವರಿಸಿಕೊಂಡು ಹೋಗವಂತದ್ದು ಈ ಪಾತ್ರಗಳಲ್ಲಿ ಕಂಡು ಬರುತ್ತವೆ.

**ಭಾಷೆ:**

ಈ ನಾಟಕದ ಭಾಷೆ ಕರ್ನಾಟಕ ರಾಜ್ಯದ ಉತ್ತರ ಭಾಗದ ಗಡಿನಾಡ ಪ್ರದೇಶವಾದ ಬೀದರದ ಪ್ರಾದೇಶಿಕ ಭಾಷೆಯನ್ನು ಕಂಡು ಬರುತ್ತದೆ. ಈ ಭಾಷೆಯಲ್ಲಿ ಅಚ್ಚಗನ್ನಡದ ಅನೇಕ ಶಬ್ದಗಳಿರುವಂತದ್ದು ಕಂಡು ಬರುತ್ತದೆ.

**ಹನುಮನಾಯಕ**

ಈ ನಾಟಕದಲ್ಲಿ ಹೊಸ ವಿಚಾರವೆಂದರೆ, ನಾಟಕ ನೋಡುವಂತಹ ಪ್ರೇಕ್ಷಕರು ಹೊಸ ಬಗೆಯ ಚಿಂತನೆಗಳನ್ನು ಬಯಸುತ್ತಿದ್ದಾರೆ. ಅದೇ ಹಳೆ ರಾಮಾಯಣ, ಮಹಾಭಾರತ ಜನ ನೋಡಿ, ಕೇಳಿ ಸಾಕಾಗಿದೆ. ಹೊಸ ಬಗೆಯ ನಾಟಕಕ್ಕೆ ಜನ ಬಯಸುವಂತದ್ದು, ಮತ್ತೊಂದು ಮಹತ್ವದ ವಿಷಯ. ಈ ನಾಟಕದಲ್ಲಿ ಟಿ.ವಿ. ಮಾಧ್ಯಮದಿಂದ ದೇಶಿಯ ರಂಗಭೂಮಿಗಳಾದ ನಾಟಕ, ಕೋಲಾಟ, ದೋಡ್ಡಾಟ, ಸಣ್ಣಾಟ ಇಂತಹ ಜನಪದ ದೃಶ್ಯಗಳ ಮೇಲೆ ಅವು ಹೇಗೆ ಪ್ರಭಾವ ಬೀರಿವೆ ಎಂಬ ವಿಚಾರ ಈ ನಾಟಕದಲ್ಲಿ ಬರುವಂತಹ ಅಂಶದಿಂದ ತಿಳಿಯುತ್ತದೆ. 'ಈಗ ಸ್ಟಾರ್ ಚಾಲನ್‌ದಾಗ ಬ್ರೆಕ್ ಡಾನ್ಸ್ ನಡೆದಾವ[೧೯] ಎಂಬ ಮಾತು ಪ್ರೇಕ್ಷಕರಲ್ಲಿ ಮೂಡಿದಾಗ ಸೂತ್ರಧಾರನು ಪ್ರೇಕ್ಷಕರ ಅಪೇಕ್ಷೆಗೆ ಅನುಗುಣವಾಗಿ ಕಾರ್ಯ ಮಾಡುವ ಸಮಯ ಬಂದಿದೆ ಎಂದು ಅರ್ಥ ಮಾಡಿಕೊಳ್ಳಬೇಕಾಗುತ್ತದೆ.

ಈ ನಾಟಕದಲ್ಲಿ ಇಂದಿನ ರಾಜಕೀಯ ನೈಜ್ಯ ಚಿತ್ರಣದ ಮೇಲೆ ಬೆಳಕು ಚೆಲ್ಲುವ ರೀತಿಯಲ್ಲಿ ಯಾವ ವ್ಯಕ್ತಿ ಯಾವ ಸ್ಥಾನಕ್ಕೆ ಯೋಗ್ಯನು ಎಂಬುವುದು ನಾಟಕದಲ್ಲಿ ತೋರಿಸಲು ಪ್ರಯತ್ನ ನಡೆದಿದೆ. ಒಬ್ಬ ಅಯೋಗ್ಯ ವ್ಯಕ್ತಿ ಜನಪ್ರತಿನಿಧಿಯಾಗಿ ಮಂತ್ರಿ ಸ್ಥಾನ ಪಡೆದರು. ನಾಲ್ಕು ಜನರನ್ನುದ್ದೇಶಿಸಿ ಮಾತನಾಡಲು ಬರುವುದಿಲ್ಲ. ಅಂತಹ ವ್ಯಕ್ತಿ ಜನರ ಸಮಸ್ಯೆಗಳು ಹೇಗೆ

೧೯. ನಾಲ್ಕು ಬೀದಿ ನಾಟಕಗಳು – ಡಾ. ಬಸವರಾಜ ಸಬರದ ಪುಟ–೩೨.

ಬಗೆಹರಿಸುವುದು ಸಾಧ್ಯವಿಲ್ಲ. ಇಂತಹ ಪ್ರತಿನಿಧಿಗಳು ಆರಿಸುವಲ್ಲಿ ಜನಜಾಗೃತರಾಗಬೇಕೆಂಬ ಸಂದೇಶ ಮೂಡಿಬಂದಿದೆ. ಮಂತ್ರಿಯ ಕಾರ್ಯದರ್ಶಿಗಳು ಕೂಡಾ ಮಂತ್ರಿಯ ಎಲ್ಲಾ ತಪ್ಪುಗಳನ್ನು ಮುಚ್ಚುವಂತಹ ಪ್ರಯತ್ನ ಮಾಡುವುದು ಅಧಿಕಾರಿಗಳ ಕರ್ತವ್ಯದ ದೋಷ ತೋರಿಸಿಕೊಡುತ್ತದೆ.

ನಾಟಕದ ಕೊನೆಯ ದೃಶ್ಯದಲ್ಲಿ ಸ್ತ್ರೀ ಸ್ವಾತಂತ್ರ್ಯಯ ಬಗ್ಗೆ ಬೆಳಕು ಚೆಲ್ಲುತ್ತದೆ. ಒಬ್ಬ ಜವಾಬ್ದಾರಿಯುತ ಪೊಲೀಸ ಅಧಿಕಾರಿಗಳು ಸ್ತ್ರೀಯರ ಬಗ್ಗೆ ನಡೆದುಕೊಳ್ಳುವ ರೀತಿ ಇಡೀ ಅಧಿಕಾರಿ ವರ್ಗದವರು ತಲೆತಗ್ಗಿಸುವಂತ ಕೆಲಸವಾಗಿದೆ. ಈ ನಾಟಕದಲ್ಲಿ ಸ್ತ್ರೀಯರ ನೈಜ್ಯವಾದ ಸಮಸ್ಯೆಗಳು ಅವರು ಯಾವ ದೃಷ್ಟಿಯಿಂದ ಮಂತ್ರಿ ಅಧಿಕಾರಿಗಳು ಕಂಡಿದ್ದಾರೆ ಎಂಬುವುದು ಪುರುಷರು ಹೆಣ್ಣನ್ನು ಕೇವಲ ಭೋಗದ ವಸ್ತುವೆಂದು ಭಾವಿಸಿದಂತದ್ದು, ಅಧಿಕಾರಿಗಳು ಹೆಣ್ಣು ಹೊನ್ನು ಮಣ್ಣಿಗಾಗಿ ಎಂತ ಕೀಳು ಮಟ್ಟದ ಕೆಲಸ ಮಾಡಲು ಸಿದ್ಧರಿದ್ದಾರೆ ಎಂಬುವುದು ಈ ನಾಟಕದಲ್ಲಿ ಕಂಡು ಬಂದಿದೆ. ಇದನ್ನು ವಿರೋಧಿಸುವ ನಿಟ್ಟಿನಲ್ಲಿ ಜನ ಸಂಘಟನೆಯಿಂದ ಇಂತಹ ಸಮಸ್ಯೆಗಳು ಸರಳವಾಗಿ ಬಗೆಹರಿಸಬಹುದೆಂದು ಈ ನಾಟಕದ ಮುಖಾಂತರ ಗೊತ್ತಾಗುತ್ತದೆ. ಎಲ್ಲಿ ಒಕ್ಕಟ್ಟು, ಏಕತೆ, ಸಂಘಟನೆ ಇರುತ್ತದೆಯೋ ಅಲ್ಲಿ ನ್ಯಾಯ ಸಿಗುತ್ತದೆ ಎಂಬ ನಾಟಕದ ಸಂದೇಶ ಒಪ್ಪಿಕೊಳ್ಳಬೇಕಾಗುತ್ತದೆ.

'ರಾಮಾಯಣದ ಕಾಲದಲ್ಲಿದ್ದ ವಿಷಮತೆಗಳು ಇಂದು ಕೂಡ ಬೇರೆ ಬೇರೆ ರೂಪಗಳಲ್ಲಿ ಮುಂದುರೆಯುತ್ತಿವೆ ಎಂಬುವುದನ್ನು ಎರಡು ಬೇರೆ ಬೇರೆ ದೃಶ್ಯಗಳಲ್ಲಿ ನಿರೂಪಿಸಲಾಗಿದೆ. ಮಂತ್ರಿಯು ಸಾರ್ವಜನಿಕ ಸಭೆಯನ್ನು ಸಂಪೂರ್ಣ ವಿಡಂಬಣೆ ದೃಶ್ಯವನ್ನಾಗಿ ಮಾಡಲಾಗಿದೆ. ಪೊಲೀಸ ಠಾಣೆಯ ದೃಶ್ಯದಲ್ಲಿ ಸೀತಾರಾವ ಅವಳನ್ನು ಸುಳ್ಳು ಅಪಾದನೆಯ ಮೇಲೆ ಬಂಧಿಸಿ, ತನ್ನೊಡನೆಸ ಕೂಡಲು ಇನ್ಸ್‌ಪೇಕ್ಟರ್ ಲಂಕೇಶ ಒತ್ತಾಯಿಸುತ್ತಾನೆ. ಮಹಿಳಾ ಸಂಘಟನೆ ಇವಳನ್ನು ಬಿಡಿಸುತ್ತಾರೆ. ಇದರಲ್ಲಿ ಪೊಲೀಸ ವ್ಯವಸ್ಥೆಯ ಕರಾಳತೆ ಗಾಢವಾಗಿ ಮೂಡಿಬಂದಿದೆ[೨೦] ಒಟ್ಟಿನಲ್ಲಿ ಹನುಮನಾಯಕ ನಾಟಕ ಸಾಮಾಜಿಕ ಚಿಂತನೆ ವಿಷಯವಾಗಿ ಸ್ತ್ರೀಯರ ಇಂದಿನ ಅಸಹಾಯಕತೆ ಅಧಿಕಾರ ವರ್ಗದ ಮೌಢ್ಯತೆ, ಮಂತ್ರಿಗಳ ನಡೆದುಕೊಳ್ಳುವ ನೀತಿ ಈ ಎಲ್ಲವೂ ನಾಟಕದಲ್ಲಿ ಪರಿವರ್ತನೆಗೆ ಅವಕಾಶ ಮತ್ತು ಜನಜಾಗೃತಿಗೆ ನಾಂದಿಯಾಗಿ ಮೂಡಿಬಂದಿದೆ.

**ಹನುಮನಾಯಕ ನಾಟಕದ ಪಾತ್ರಗಳು:**

ಈ ನಾಟಕದಲ್ಲಿನ ಪಾತ್ರಗಳು ಇಂತಿವೆ, ಸೂತ್ರಧಾರ, ಹನುಮನಾಯಕ, ರಾಮಚಂದ್ರರಾವ, ಸಿತಾರಾವ, ಲಂಕೇಶ, ಮಹಿಳೆ, ಸಂಚಾಲಕ, ಕಾರ್ಯಕರ್ತರು, ಮೇಳ ಇಲ್ಲಿನ ಪ್ರಮುಖ ಪಾತ್ರಗಳಾಗಿವೆ. ಇಲ್ಲಿನ ಪಾತ್ರಗಳು ಪೌರಾಣಿಕ ಹೆಸರುಗಳನ್ನು ಒಳಗೊಂಡಿವೆ. ಪೌರಾಣಿಕ ಹೆಸರುಗಳು ಇದ್ದರೂ ಆಧುನಿಕವಾದ ವಿಚಾರಗಳ ಲೇಪನದೊಂದಿಗೆ ನಾಟಕದ ಪಾತ್ರಗಳು ಕಾರ್ಯನಿರ್ವಹಿಸುತ್ತವೆ. ಸೂತ್ರಧಾರನ ಚಮತ್ಕಾರವಾದ ವಿಚಾರದಿಂದ ಪಾತ್ರಗಳ ಕಾರ್ಯವನ್ನು ಬದಲಾಯಿಸಿ ಪ್ರಯೋಗಿಸುತ್ತಾನೆ. ಇಲ್ಲಿನ ಪಾತ್ರಗಳು ತಮ್ಮ ಜವಾಬ್ದಾರಿಯಲ್ಲಿಯೇ ಕಾರ್ಯ ನಿರ್ವಹಿಸುತ್ತದೆ.

**ಭಾಷೆ:**

ಇಲ್ಲಿನ ಭಾಷೆ ಗ್ರಾಮೀಣ ಭಾಷೆಯಾಗಿದ್ದು, ಓದುಗರಿಗೆ ಸರಳವಾಗಿ ತಿಳಿಯುವಂತಹ ಭಾಷೆಯಾಗಿದ್ದು, ಆಕರ್ಷಣೀಯವಾದ ವಿಚಾರಗಳನ್ನು ಹೊಂದಿದೆ. ಈ ಭಾಷೆಯಲ್ಲಿ ಅನೇಕ ಬೇರೆ ಭಾಷೆಗಳ ಪ್ರಭಾವವಾದಂತದ್ದು ಕಂಡು ಬರುತ್ತದೆ. ಉದಾಹರಣೆಗೆ 'ಮಾಫ್ ಮಾಡು ತಾಯಿ' 'ಮಾಸ್ತರ್ ಹಾಜರ್' 'ಲೈಫ್ ಲಾಂಗ್' 'ಎಮರ್ಜನ್ಸಿ ಮಿಟಿಂಗ್' ಅನ್ನುವಂತಹ ಅನ್ಯ ಪದಗಳ ಪ್ರಭಾವ ಕಾಣಬಹುದು.

## ಸಾಲದ ಹೆಣ

ಭಾರತದಲ್ಲಿ ರೈತನು ಈ ದೇಶದ ಬೆನ್ನೆಲುಬು ಎಂಬ ಮಾತು ಕೇಳು ಬರುತ್ತದೆ. ಈ ನಾಟಕದಲ್ಲಿ ರೈತನ ಬದುಕಿನ ದೈನಂದಿನ ಸ್ಥಿತಿಗಳು ಮತ್ತು ಸಮಸ್ಯೆಗಳು ಕಂಡು ಬರುತ್ತವೆ. ಈ ನಾಟಕದ ವಸ್ತು ಗ್ರಾಮೀಣ ಭಾಗದ ರೈತನ ಬದುಕಿಗೆ ಸಂಬಂಧಿಸಿದ ವಿಚಾರವಾಗಿದೆ. ಭಾರತ ದೇಶ ಕೃಷಿ ಪ್ರಧಾನವಾದ ದೇಶವಾಗಿದ್ದರೂ ರೈತರ ಸ್ಥಿತಿ ಚಿಂತಾಜನಕವಾಗಿದೆ. ಅವರ ಜೀವನ ಹೆಜ್ಜೆ ಹೆಜ್ಜೆಗು ಸಂಘರ್ಷಮಯವಾಗಿ ಕಾಡುತ್ತಿದೆ. ಅವರ ಬದುಕು ದುಃಖಮಯದಿಂದ ಕೂಡಿದೆ. ಅವರ ಜೀವನದಲ್ಲಿ ಸಾಲಮುಕ್ತರಾಗಿ ಬದುಕಲು ಸಾಧ್ಯವಾಗದಂತ ಸ್ಥಿತಿ ಕಂಡು ಬರುತ್ತಿದೆ.

ಇಡೀ ಜೀವನ ಸಾಲದಲ್ಲಿಯೇ ಕಳೆಯುವಂತ ಸ್ಥಿತಿ ರೈತನಿಗೆ ಬಂದಿದೆ. ಕಾರಣಗಳು ಸಾಕಷ್ಟು ಇರಬಹುದು. ರೈತನು ಬೆಳೆಯುವ ಬೆಳೆಗಳ ಉಪಚಾರಕ್ಕಾಗಿ ತಂದ ಸಾಲ, ಅವನಿಗೆ ಪ್ರಕೃತಿ ಕೈಕೊಟ್ಟಾಗ, ಅವನ ಸ್ಥಿತಿ ಬಹಳ ಕೆಟ್ಟದಾಗುವುದು. ರೈತನ ಮನೆಯಲ್ಲಿನ ಸದಸ್ಯರು, ಬೆಳೆಗಳ ಮೇಲೆ ನಿರ್ಭರಾದಂತಹವರು. ಒಂದು ವೇಳೆ ಬೆಳೆ ಬೆಳೆಯದಿದ್ದಾಗ ರೈತನು ಕಂಗಾಲಾಗುವನು. ರೈತನ ಮನೆಯಲ್ಲಿನ ಸದಸ್ಯರು ಕೂಲಿ ನಾಲಿ ಮಾಡಿ ಬದುಕುವಂತದ್ದು, ಮನೆಯ ಮಕ್ಕಳು ಬೇರೆಯವರ ಹತ್ತಿರ ಹೋಗಿ ದುಡಿದು, ತಿಂಬುವಂತದ್ದು, ಒಂದು ದಿವಸ ಕೆಲಸ ಮಾಡದಿದ್ದರೆ ಆ ದಿವಸ ಉಪವಾಸ ಇರುವಂತಹ ಸ್ಥಿತಿ ರೈತನದ್ದಾಗಿದೆ. ರೈತ ತನ್ನ ಹೊಲದ ಬೆಳೆಯ ಮೇಲೆ ಬಹಳಷ್ಟು ನಿರ್ಭರನಾಗಿರುತ್ತಾನೆ. ಅವನದೇಯಾದ ಆಸೆಗಳು, ಅಕಾಂಕ್ಷೆಗಳು ಇರುವಂತದ್ದು, ಕಂಡು ಬರುತ್ತದೆ. ತಂದ ಸಾಲದ ಬಡ್ಡಿಯನ್ನು ತೀರಿಸುವುದು, ಬೆಳೆದುನಿಂತ ಮಗಳ ಮದುವೆಯನ್ನು ಮಾಡಿಸುವುದು, ಮಗನಿಗೆ ಉದ್ಯೋಗವನ್ನು ಕಲ್ಪಿಸುವಂತದ್ದು, ನೆಮ್ಮದಿಯ ಜೀವನ ಬದುಕನ್ನು ಬದುಕುವ ಆಸೆಯನ್ನು ಹೊಂದಿದ್ದಾನೆ. ಆದರೆ ಅವನ ಕನಸುಗಳೆಲ್ಲ ಕೇವಲ ಕನಸಾಗಿಯೇ ಉಳಿಯುವಂತದ್ದು, ರೈತನ ಸ್ಥಿತಿಯನ್ನು ಹೇಳುತ್ತದೆ. ಪ್ರಕೃತಿ ರೈತನಿಗೆ ಸಹಕರಿಸದೇ ಹೋದರಿಂದ ರೈತರು ಕಂಗಾಲಾಗಿ ತಮ್ಮ ಬದುಕೇ ಬೇಜಾರಾಗಿ ಮಾಡಿಕೊಳ್ಳುವರು. ಮತ್ತು ಗ್ರಾಮೀಣ ಜನರು ಪಟ್ಟಣಕ್ಕೆ ಒಲಸೆ ಹೋಗುವಂತದ್ದು, ಇದರ ಒಂದು ಪರಿಣಾಮವಾಗಿ ಕಂಡು ಬರುವುದು.

ರೈತನ ಬದುಕು ಎಲ್ಲಾ ದೃಷ್ಟಿಯಿಂದಲೂ ದುಬಾರಿಯಾಗಿದೆ. ಬೀಜಗಳು ಗೊಬ್ಬರ, ಔಷಧಗಳು, ಕೂಲಿ ಆಳುಗಳು ಬಹಳಷ್ಟು ದುಬಾರಿಯಾದ ಕಾರಣ ರೈತನು ಸಾಲಕ್ಕೆ ಮೊರೆ ಹೋಗಬೇಕಾದ ಸ್ಥಿತಿ ಬಂದಿದೆ. ಒಮ್ಮೆ ರೈತನಿಗೆ ಸಾಲ ಅಂಟಿಕೊಂಡರೆ ಅದು ಅವನು ಸಾಯುವವರೆಗೂ ಹೋಗಲಾರಂತ ಸ್ಥಿತಿ ಕಂಡು ಬರುತ್ತದೆ. ರೈತನ ಸ್ಥಿತಿ ಇಷ್ಟೂ ಚಿಂತಾಜನಕವಾಗಿದೆ ಎಂದರೆ, ತನ್ನ ಮಡದಿಯ ಸೌಭಾಗ್ಯದ ಸಂಕೇತವಾದ ಮಾಂಗಲ್ಯವನ್ನೇ ಮಾರಿದರೂ ಅವನ ಸಾಲ ತೀರಿಸಿಕೊಳ್ಳಲು ಸಾಧ್ಯವಾಗದ ಸ್ಥಿತಿ ಕಂಡು ಬಂದಿದೆ. ಸಾಲ ಕೊಟ್ಟಂತ ಅಧಿಕಾರಿಗಳು, ಸಂಘ ಸಂಸ್ಥೆಗಳು, ರೈತನ ಮನೆಯ ಹರಾಜಿಗೆ ಇಡುವಂತದ್ದು ಇಂತಹ ಸ್ಥಿತಿ ತನ್ನ ತಂದೆಗೆ ಬಂತೂ ಎಂದು ತಿಳಿದು, ಮನೆಯಿಂದ ಮಗಳು ಓಡಿಹೋಗುವಂತದ್ದು, ಕೆಲಸ ಸಿಗಲಾರದೇ ಮಗ ಪಟ್ಟಣವೆಲ್ಲಾ ಸುತ್ತಾಡುವಂತದ್ದು ಓದುಗರ ಮನ ಮಿಡಿಯುವಂತೆ ಕಂಡು ಬರುತ್ತದೆ.

ಇಂತಹ ಸ್ಥಿತಿಯಲ್ಲಿ ಆತ್ಮೀಯ ಮಿತ್ರರೂ ಕೂಡಾ ಸಹಕರಿಸುವುದಿಲ್ಲ. ಕೇವಲ ತೋರಿಕೆ ಮಾತುಗಳನ್ನು ಹೇಳಿ ಕಳುಹಿಸುವಂತದ್ದು, ಇಂದಿನ ಜೀವನದಲ್ಲಿ ಆತ್ಮೀಯತೆ ಎಂಬುವುದು ಎಷ್ಟರ ಮಟ್ಟಿಗೆ ಬೆಳೆದಿದೆ ಎಂಬುವುದು ಕಂಡು ಬರುತ್ತದೆ. ಈ ನಾಟಕದಲ್ಲಿ ಉನ್ನತ ಹುದ್ದೆಯ ಅಧಿಕಾರಿಗಳು ತಮ್ಮ ಜವಾಬ್ದಾರಿಯನ್ನು ಮರೆತು ಅತೀ ಕೀಳು ಮಟ್ಟದ ಕೆಲಸಕ್ಕೆ ಕೈ ಹಾಕುವಂತದ್ದು, ಇಡೀ ಅಧಿಕಾರಿ ವರ್ಗಗಳಿಗೆ ತಲೆ ತಗ್ಗಿಸುವಂತೆ ಕೆಲಸ ಇದಾಗಿದೆ. ತಾನೇ ಕಾಪಾಡಬೇಕಾದಂತ ವ್ಯಕ್ತಿ ಅವನೇ ನಾಶ ಮಾಡಿದರೆ ಸಾಮಾನ್ಯ ಜನರು ಯಾರಿಗೆ ನ್ಯಾಯ ಕೇಳಬೇಕು ಎಂಬ ವಿಚಾರ ಇದರಲ್ಲಿ ಕಂಡು ಬರುತ್ತದೆ. ಒಬ್ಬ ಬಡ ಹೆಣ್ಣಿನ ಮಾನ ತೆಗೆಯುವಂತದ್ದು, ಅವಳ ಬದುಕನ್ನೇ ನಾಶಮಾಡುವಂತದ್ದು, ದೃಶ್ಯ ಭಯಾನಕವಾದ ಚಿಂತೆಗೆ ಒಳಮಾಡುತ್ತದೆ.

ಇಂದು ರೈತನಿಗೆ ಸಾಲವಾಗಲು ಮತ್ತೊಂದು ಪ್ರಮುಖ ಕಾರಣವೆಂದರೆ, 'ಇಂದಿನ ಮುಕ್ತ ಆರ್ಥಿಕ ನೀತಿ ಮತ್ತು ಜಾಗತೀಕರಣದ ಸನ್ನಿವೇಶದಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವ ರೈತನ ಬದುಕಿಗೆ ಸಂಬಂಧಿಸಿದೆ. ರೈತ ಸಾಲ ತಂದು ತೊಗರೆ ಬೆಳೆಯುತ್ತಾನೆ. ಆದರೆ ತೊಗರಿಗೆ ಕೀಟ ಬಿದ್ದು, ಬೆಳೆ ನಾಶವಾಗುತ್ತದೆ. ಮದುವೆಗೆ ಬಂದ ಮಗಳು ಮನೆಗೆ ಜಪ್ತಿ ಬರುವಂತ ಅಧಿಕಾರಿಗೆ ಬಲಿಯಾಗಿ ಮಾನಕಳೆದುಕೊಂಡು, ಮನೆಯಿಂದ ಓಡಿ ಹೋಗುತ್ತಾಳೆ. ಮಗ ಫ್ಯಾಕ್ಟ್ರಿಯ ಕೆಲಸ ಕಳೆದುಕೊಂಡು ನಿರುದ್ಯೋಗಿಯಾಗುತ್ತಾನೆ. ಈ ಎಲ್ಲಾ ಕಾರಣದಿಂದ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಜಾಗತೀಕರಣದ ನೇರ ಪ್ರಭಾವ ಇಲ್ಲಿ ಕಾಣಬಹುದು[೨೧].

ಈ ನಾಟಕದಲ್ಲಿ ಹೈದ್ರಾಬಾದ ಕರ್ನಾಟಕದ ರೈತನ ಪ್ರಮುಖ ಬೆಳೆಯಾದ ತೊಗರೆ ಬೆಳೆಯ ಸಂಬಂಧಪಟ್ಟಂತ ವಿಚಾರಗಳು ಈ ನಾಟಕದಲ್ಲಿ ಕಂಡು ಬರುತ್ತವೆ. 'ಈ ನಾಟಕದಲ್ಲಿ ಪ್ರೇಕ್ಷಕರನ್ನು ರಂಜಿಸುವ ವಿಡಂಬನಾತ್ಮಕ ಗುಣವು ಇದ್ದು, ಪ್ರೇಕ್ಷಕರನ್ನು ಚಿಂತನೆಗೆ ಹಚ್ಚಬಲ್ಲಂತಹ ವೈಚಾರಿಕ ಗುಣವೂ ಇದೆ. ಪುಸ್ತಕ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಭಾಷಿಕ, ಔದ್ಯೋಗಿಕ ಬಿಕ್ಕಟ್ಟುಗಳನ್ನು ಈ ನಾಟಕದಲ್ಲಿ ಕಾಣಬಹುದು[೨೨]. ಒಟ್ಟಿನಲ್ಲಿ ಈ ನಾಟಕಗಳು ಡಾ. ಬಸವರಾಜ ಸಬರದರು ಜನರ ನೈಜ್ಯ ಬದುಕಿನ ಚಿತ್ರಣವನ್ನು ಅತೀ ಹತ್ತಿರದಿಂದ ಕಂಡು, ಅವು ಸಮಾಜಕ್ಕೆ, ಸರಕಾರಕ್ಕೆ, ಓದುಗರಿಗೆ ತಿಳಿಸುವ ಪ್ರಮಾಣೀಕವಾದ ಪ್ರಯತ್ನ ಮಾಡಿದ್ದಾರೆ. ಅವರ ಪ್ರಯತ್ನ ಫಲ ನೀಡುವುದರಲ್ಲಿ ಯಾವುದೇ ಅನುಮಾನವಿಲ್ಲ. ಇಂತಹ ಬೀದಿ ನಾಟಕಗಳಿಂದ ಜನಜಾಗೃತರಾಗಿ ತಮ್ಮ ಮಕ್ಕಳಿಗೆ

---

೨೧. ಸಕಾಲಿಕ ಅವಲೋಕನ ಪುಟ–೧೧ ದಿನಾಂಕ: ೧೭–೪–೨೦೦೩.

೨೨. ಪ್ರಜಾವಾಣಿ ದಿನ ಪತ್ರಿಕೆ ದಿನಾಂಕ: ೧೩–೧–೨೦೦೨. ಸಂಪಾದಕ ಎಸ್. ಮಾಲತಿ.

ಒಳ್ಳೆಯ ಶಿಕ್ಷಣ, ಒಳ್ಳೆಯ ಜನನಾಯಕರನ್ನು, ಒಳ್ಳೆಯ ಅಧಿಕಾರಿಗಳನ್ನು ಸರಕಾರವು ರೈತರ ನೆರವಿಗೆ ಬರುವದೆಂಬ ಆಶಾ ಭಾವನೆ ಈ ನಾಟಕದಿಂದ ಕಂಡು ಬರುತ್ತದೆ.

**ಸಾಲದ ಹೆಣ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳು ಬಸವಂತ, ಬಾಳವ್ವಾ, ಮಲ್ಲೇಶಿ, ಬಂಗಾರೆವ್ವಾ, ತಹಸೀಲ್ದಾರ, ಮರಿಯಾ, ರಮೇಶ, ಮುದುಕ, ಮುದುಕಿ, ಯುವಕ, ಒಬ್ಬ, ಇನ್ನೊಬ್ಬ, ಮೇಳ ಇವೆ ಪ್ರಮುಖವಾದ ಪಾತ್ರಗಳಾಗಿವೆ. ಇಲ್ಲಿನ ಪಾತ್ರಗಳು ಒಂದಕ್ಕೊಂದು ಸಂಬಂಧ ಕಲ್ಪಿಸುವಂತದ್ದು ಕಂಡು ಬರುತ್ತದೆ.

**ಭಾಷೆಃ**

ಇಲ್ಲಿನ ಗ್ರಾಮೀಣ ಮತ್ತು ಅನಕ್ಷರಸ್ಥರ ಭಾಷೆಯಂತೆ ಕಂಡು ಬರುತ್ತದೆ. ಈ ಭಾಷೆ ಸರಳವಾಗಿ ಅರ್ಥವಾಗುವಂತ ಭಾಷೆಯಾಗಿದೆ.

**ಐದು ಬೀದಿ ನಾಟಕಗಳು**

**ಜೀವಜಲ**

ಡಾ. ಬಸವರಾಜ ಸಬರದರ ಐದು ಬೀದಿ ನಾಟಕಗಳಲ್ಲಿ ಜೀವಜಲ ಒಂದಾಗಿದೆ. ಈ ನಾಟಕದಲ್ಲಿ ಪ್ರಕೃತಿಯನ್ನು ಕುರಿತು ಅಂತರ್‌ಜಲ ಮಟ್ಟ ಇಳಿಮುಖವಾಗುವುದನ್ನು ಕುರಿತು, ಜನಜಾಗೃತಿ ಮಾಡುವಂತದ್ದು ಕಂಡು ಬರುತ್ತದೆ. ೨೧ ನೇ ಶತಮಾನದಲ್ಲಿ ನೀರಿನ ಸಮಸ್ಯೆಯನ್ನು ಕುರಿತು ಈ ಅಧ್ಯಯನ ತುಂಬಾ ಉಪಯುಕ್ತವಾಗಿದೆ. ಅಂತರ್‌ಜಲ ಕುಸಿಯುವುದಕ್ಕೆ ಕೊಳವೆ ಬಾವಿಗಳು ಹೇಗೆ ಕಾರಣ ಎಂಬುವುದು ವಿವರಿಸುವಂತದ್ದು ಈ ನಾಟಕದಲ್ಲಿ ಕಂಡು ಬರುತ್ತದೆ. ನೀರಿನ ಸದ್ಬಳಕೆಯಾಗದಿದ್ದರೆ ಮುಂದಿನ ದಿನಗಳಲ್ಲಿ ನೀರಿಗಾಗಿ ಕ್ರಾಂತಿಯಾಗುವ ಸಂಭವ ಉಂಟು ಎಂಬ ಚಿಂತಕರ ಮಾತು ಜನಜಾಗೃತಿಯನ್ನು ಮಾಡುತ್ತದೆ.

ಸರಕಾರ ಬಡವರಿಗಾಗಿ ಸಾರ್ವಜನಿಕರಿಗಾಗಿ ತೋಡಿಸಿದ ಕೊಳವೆ ಬಾವಿಗಳು, ಅಧಿಕಾರಿಗಳು, ಜನಮುಖಂಡರು ಹೇಗೆ ದುರುಪಯೋಗ ಮಾಡಿಕೊಳ್ಳುತ್ತಿದ್ದಾರೆ ಎಂಬುವುದು ಈ ನಾಟಕದಲ್ಲಿ ಮೂಡಿಬಂದಿದೆ. ಸಮಾಜ ಸುಧಾರಿಸಬೇಕಾದರೆ ಕಲಿತ ಯುವಕ,

ಯುವತಿಯರಿಂದಲೇ ಸಾಧ್ಯ ಎಂಬ ವಿಚಾರ ಜನಜಾಹಿರವಾಗಿದೆ. ಸಮಾಜದಲ್ಲಿ ಆಗುವಂತಹ ತಪ್ಪುಗಳು, ಯುವಕರಿಂದಲೇ ಬಗೆಹರಿಸಬಹುದು ಎಂಬ ವಿಚಾರವೂ ಕೂಡಾ ಮೂಡಿಬಂದಿದೆ. ಸರಕಾರಿ ಅಧಿಕಾರಿಗಳು ಯುವಕರಿಗೆ ಸಹಕರಿಸುವಂತದ್ದು, ಬಡ ಜನರ ಸ್ತ್ರೀಯರ ದಿನನಿತ್ಯದ ಸಮಸ್ಯೆಗಳಲ್ಲಿ ಶೌಚಾಲಯ ಇರಬಹುದು ಮತ್ತಾವುದೇ ಸಮಸ್ಯೆ ಇರಬಹುದು. ಸರಕಾರಿ ಅಧಿಕಾರಿಗಳು ಅದಕ್ಕೆ ಒಳ್ಳೆಯ ರೀತಿಯಿಂದ ಸ್ಪಂದಿಸಬೇಕೆಂದು ನಾಟಕದಲ್ಲಿ ಮೂಡಿ ಬಂದಿದೆ.

ಸರಕಾರದ ಯೋಜನೆಗಳು ಮಧ್ಯವರ್ತಿಗಳ ಕೆಟ್ಟ ನೀತಿಯಿಂದ ಹೇಗೆ ಅಪೂರ್ಣವಾಗಿವೆ ಎಂಬುವುದು ಮತ್ತು ಅದರ ದುರುಪಯೋಗವಾಗುವಂತದ್ದು ಕಂಡು ಬರುತ್ತದೆ. ಈ ನಾಟಕದಲ್ಲಿನ ಗೌರಜ್ಜಿ ಪಾತ್ರ ಜಲ, ನೆಲದ ಪಾವಿತ್ರ್ಯತೆ ಕುರಿತು ಭೂಮಿ ಮತ್ತು ನದಿಗಳು ತಾಯಿ ಸಮಾನ ಎಂದು ಅವುಗಳ ಪಾವಿತ್ರ್ಯಯನ್ನು ಕಾಪಾಡಿಕೊಂಡು ಬರುವುದು ನಮ್ಮೆಲ್ಲರ ಜವಾಬ್ದಾರಿ ಎಂದು ತಿಳಿಹೇಳುತ್ತದೆ.

**ಜೀವ ಜಲ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳಾದ ಮಲ್ಲಣ್ಣ, ಕಲ್ಲಣ್ಣ, ವೆಂಕೋಬಾರಾಯ, ಸಿದ್ದಣ್ಣ, ವೀರನಗೌಡ, ಅಧಿಕಾರಿ, ಯುವಕ, ಯುವತಿ, ಗೌರಜ್ಜಿ, ಒಬ್ಬ, ಇನ್ನೊಬ್ಬ ಇವು ಈ ನಾಟಕದ ಪ್ರಮುಖ ಪಾತ್ರಗಳಾಗಿವೆ. ಈ ಪಾತ್ರಗಳು ಆಕರ್ಷಣೀಯವಾದ ಚರ್ಚೆಯೊಂದಿಗೆ ಓದುಗರ ಗಮನ ಸೆಳೆಯುತ್ತವೆ.

ಭಾಷೆಃ

ಈ ನಾಟಕದ ಭಾಷೆ ಗ್ರಾಮೀಣ ಜನರ ಆಡುವ ಭಾಷೆಯನ್ನು ಬಳಸಲಾಗಿದೆ. ಇಲ್ಲಿನ ಭಾಷೆ ಹಾಸ್ಯಮಯವಾದ ಮತ್ತು ನೀತಿ ಪಾಠಗಳನ್ನು ಒಳಗೊಂಡ ಭಾಷೆಯಾಗಿದೆ.

**ಕಾಯಕ ಜೀವಿಗಳುಃ**

ಈ ನಾಟಕದಲ್ಲಿ ಸಮಾಜದಲ್ಲಿ ದುಡಿಯುವ ವರ್ಗದವರನ್ನು ಹಿಂದೂ ಧರ್ಮದ ಹೆಸರಿನಲ್ಲಿ ಒಡೆದು ಆಳುವ ರಾಜಕೀಯ ಪುಡಾರಿಗಳ ಕಾರ್ಯ ವೈಖರಿಯ ಬಗ್ಗೆ ಚರ್ಚಿಸಿದ್ದಾರೆ. ಸಂಶೋಧನಾ

ಮಾಡುವಂತಹ ವ್ಯಕ್ತಿ ಜವಾಬ್ದಾರಿಯುತವಾದ ಕೆಲಸ ಇರುವಂತದ್ದು ಕಂಡು ಬರುತ್ತದೆ. ಯಾವುದೇ ವಿಷಯದ ಬಗ್ಗೆ ಮಾತಾಡಬೇಕಾದರೆ ಆ ವಿಷಯದ ಕುರಿತು ಪರಿಪೂರ್ಣ ಜ್ಞಾನ ಹೊಂದಬೇಕು. ಮತ್ತು ಅದರ ಬಗ್ಗೆ ಅಧ್ಯಯನ ಮಾಡಿ ತಮ್ಮ ವಿಚಾರವನ್ನು ವ್ಯಕ್ತಪಡಿಸಬೇಕು. ಅದು ಬಿಟ್ಟು ಮನಸ್ಸಿಗೆ ಬಂದಂತ ವಿಚಾರಗಳು ಮಂಡಿಸಿದರೆ ಸಮಾಜದ ಜನರಿಂದ ಛಿಮಾರಿ ಹಾಕಿಸಿಕೊಳ್ಳಬೇಕಾಗುತ್ತದೆ ಎಂಬ ಮಾತು ಕಂಡು ಬರುತ್ತದೆ.

ಇಂದಿನ ಓಟ್ ಬ್ಯಾಂಕ್ ರಾಜಕೀಯದಲ್ಲಿ ಮಂತ್ರಿಗಳಾಗಲೀ, ರಾಜಕೀಯ ಪುಡಾರಿಗಳಾಗಲೀ ಸಮುದಾಯವನ್ನು ಒಡೆದಾಳುವ ನೀತಿಯನ್ನು ಮೈಗೂಡಿಸಿಕೊಂಡಿದ್ದಾರೆ. ಒಂದು ಜಾತಿಯಲ್ಲಿಯೇ ಉಪಜಾತಿಗಳನ್ನಾಗಿ ಮಾಡಿ, ಮುಗ್ದ ಜನರ ಭಾವನೆಗಳನ್ನು ಹೊಲಸೆಬ್ಬಿಸುವ ಪ್ರಯತ್ನ ಮಾಡಿದ್ದಾರೆ. ತಮ್ಮ ದಿನನಿತ್ಯದ ವೃತ್ತಿಯನ್ನೇ ಉಪಜಾತಿಯನ್ನಾಗಿ ಮಾಡಿ, ಅದರ ಲಾಭ ಪಡೆಯಬೇಕೆಂಬ ಹಂಬಲಿಸಿದ್ದಾರೆ. ೧೨ ನೇ ಶತಮಾನದ ಶಿವಶರಣರ ಆದರ್ಶವಾದ ಸಮಾಜದ ಕಲ್ಪನೆ, ಗಾಳಿಗೆ ತೂರಿ ತಮ್ಮ ಸ್ವಾರ್ಥ ರಾಜಕೀಯನ್ನು ಉಳಿಸಿಕೊಳ್ಳಲು ಪ್ರಯತ್ನ ಮಾಡುತ್ತಿದ್ದಾರೆ. ಈ ನಾಟಕದಲ್ಲಿ ವರ್ಗರಹಿತ, ವರ್ಣರಹಿತ, ಧರ್ಮಸಹಿತವಾದ ತತ್ವಗಳನ್ನು ಒಪ್ಪಿಕೊಳ್ಳಬೇಕು ಎಂಬ ವಿಚಾರವನ್ನು ಸಮಾಜಕ್ಕೆ ತಿಳಿಹೇಳುತ್ತದೆ.

ಸಮಾಜದಲ್ಲಿನವರು ಕಾಯಕ ಜೀವಿಗಳು ನಮ್ಮ ಕಾಯಕವನ್ನು ಜವಾಬ್ದಾರಿತವಾಗಿ ಭಕ್ತಿಪೂರ್ವಕವಾಗಿ ನಿರ್ವಹಿಸಿದ್ದೇವೆ ಎಂಬ ವಿಚಾರ ಸ್ಪಷ್ಟವಾಗಿ ಮೂಡಿಬರುತ್ತದೆ. ಡಾ. ಸಬರದರು ಇಂದಿನ ತಿಳಿಯಲಾರದ ಜನ ಶರಣರ ತತ್ವ ಸಿದ್ಧಾಂತಕ್ಕೆ ಹೇಗೆ ವಿರೋಧ ವ್ಯಕ್ತಪಡಿಸುತ್ತವೆ ಎಂಬ ವಿಚಾರ ಹೇಳಿರುವಂತದ್ದು, ಇಂದಿನ ಸಮಾಜಕ್ಕೆ ಚಿಂತನ ಮಾಡುವಂತ ವಿಚಾರವಾಗಿದೆ. ಮೀಸಲಾತಿ ನಿರ್ಮಾಣವು ಎಲ್ಲಾ ಜಾತಿಯ ಬಡ ವರ್ಗದವರಿಗೆ ಅನುಗುಣವಾಗುವಂತೆ ಮಾಡಬೇಕು ಎಂಬ ವಿಚಾರ ಮೂಡಿ ಬರುತ್ತದೆ. ಮೀಸಲಾತಿಯ ದುರುಪಯೋಗ ಆಗುವಂತದ್ದು, ಈ ದೇಶದ ದೌರ್ಭಾಗ್ಯವೇ ಎಂದರೂ ತಪ್ಪಾಗಲಾರದು.

ನಮ್ಮ ದೇಶದಲ್ಲಿ ಒಂದು ಸಂದರ್ಭ ಇತ್ತು. ರಾಜಕೀಯ ಜನರು ಆದರ್ಶಪ್ರಾಯರಾಗಿದ್ದರು. ಅವರಿಗೆ ಸಮಾಜದಲ್ಲಿ ಒಂದು ರೀತಿಯ ಗೌರವಗಳು, ಘನತೆಗಳು ಇದ್ದವು. ಅವರಿಗೆ ಒಂದು ಸಿದ್ಧಾಂತ ರೀತಿ, ನೀತಿಗಳು ಇದ್ದವು. ಅಂತಹ ವ್ಯಕ್ತಿಗಳಿಗೆ ಸಮಾಜದಲ್ಲಿ ಉತ್ತಮವಾದ ಸ್ಥಾನಮಾನಗಳು ಇದ್ದವು. ಆದರೆ ಇಂದು ರಾಜಕೀಯ ಎಂದರೆ ಒಂದು ತರಹದ ಹೇಸಿಗೆ

ಬರುವಂತೆ ಇಂದಿನ ರಾಜಕೀಯ ವ್ಯಕ್ತಿಗಳು ಮಾಡಿದ್ದಾರೆ. ಅದಕ್ಕೆ ಕಾರಣ ಅವರ ನಡುವಳಿಕೆ ಚುನಾವಣೆ ಬಂದಿದೆ ಎಂದರೆ ಎಲ್ಲಾ ರಾಜಕೀಯ ಪಕ್ಷದವರಿಗು ಜನರು, ಜನರ ಸಮಸ್ಯೆಗಳು ಅವರ ಗಮನಕ್ಕೆ ಬರುವುದು. ಒಂದು ಸಲ ಆಯ್ಕೆಗೊಂಡ ನಂತರ ಪುನಃ ಚುನಾವಣೆ ಬರುವವರೆಗೆ ಜನರ ಬಗ್ಗೆ ಯಾವುದೇ ಕಳಕಳಿಯಾಗಲೀ, ಉದ್ಧಾರದ ವಿಚಾರವಾಗಲೀ ಕಂಡು ಬರುವುದಿಲ್ಲ. ಅವರು ಸರ್ವಾಧಿಕಾರಿಗಳಾಗಿ ಮೆರೆಯುತ್ತಾರೆ.

ಒಟ್ಟಿನಲ್ಲಿ ಈ ನಾಟಕದಲ್ಲಿ ಜಾತಿಯನ್ನು ಒಡೆದಾಳುವ, ಜನರಿಗು ಸುಳ್ಳು ಆಶ್ವಾಸನೆ ನೀಡಿ ಮೋಸ ಮಾಡುವ ಮುಗ್ದರ ಮನಸ್ಸುಗಳನ್ನು ಕೆಡಿಸಿ, ಒಂದೇ ಸಮುದಾಯದಲ್ಲಿ ವಿಷ ಬೀಜ ಬಿತ್ತುವ ಕಾರ್ಯ ನಡೆದಿದೆ. ಇದಕ್ಕೆ ಸಮಾಜದಲ್ಲಿ ಜನರು ಜಾಗೃತರಾಗಿ ಎಚ್ಚರಿಕೆ ವಹಿಸಬೇಕೆಂದು ಮತ್ತು ತಮ್ಮ ಕಾಯಕವನ್ನು ಶ್ರದ್ಧೆ, ಭಕ್ತಿ, ಪ್ರಮಾಣೀಕವಾಗಿ ಮಾಡಬೇಕೆಂದು ಈ ನಾಟಕದ ತಿರಳಾಗಿದೆ.

**ಕಾಯಕ ಜೀವಿ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖವಾಗಿ ಪಾತ್ರಗಳು ಇಂತಿವೆ. ಹಿಂಬಾಲಕ, ಸಂಶೋಧಕ, ಒಬ್ಬ, ಇನ್ನೊಬ್ಬ, ವ್ಯಕ್ತಿ, ಮಹಿಳೆ, ಕಾರ್ಯಕರ್ತ, ಮಂತ್ರಿ ಇವು ಈ ನಾಟಕದ ಪ್ರಮುಖ ಪಾತ್ರಗಳಾಗಿವೆ. ಈ ಪಾತ್ರಗಳು ಸಂದರ್ಭಾನುಸಾರವಾಗಿ ತಮ್ಮ ಪಾತ್ರಗಳನ್ನು ನಿಭಾಯಿಸುತ್ತದೆ.

ಭಾಷೆಃ

ಈ ನಾಟಕದಲ್ಲಿನ ಭಾಷೆ ಸಾಹಿತಿಕ ವಿಚಾರಗಳನ್ನು ಒಳಗೊಂಡ ಭಾಷೆಯಾಗಿದೆ. ಇದರಲ್ಲಿ ರಾಜಕೀಯ ವ್ಯಕ್ತಿಗಳ ಭಾಷೆ ಹೆಚ್ಚು ಆಕರ್ಷಣೀಯವಾಗಿದೆ.

**ಮಹಿಳಾ ವಿಮೋಚನೆಃ**

ಭಾರತದ ಇತಿಹಾಸದಲ್ಲಿ ೧೨ ನೇ ಶತಮಾನ ಸುವರ್ಣ ಅಕ್ಷರದಲ್ಲಿ ಬರೆದಿಡಬೇಕಾದಂತದ್ದು, ೧೨ ನೇ ಶತಮಾನದ ಶಿವಶರಣರು ವರ್ಗವರ್ಣರಹಿತ, ಧರ್ಮಸಹಿತವಾದ ಸಮಾಜವನ್ನು ನೀಡಿ, ಸ್ತ್ರೀಯರಿಗೆ ಪುರುಷರ ಸಮಾನವಾದ ಸ್ಥಾನಮಾನಗಳನ್ನು ನೀಡಿದ ಕೀರ್ತಿ ಶಿವಶರಣರಿಗೆ ಸಲ್ಲುತ್ತದೆ. ಸಮಾನತೆಯ ಹರಿಕಾರರೆಂದೇ ಪ್ರಸಿದ್ಧರಾಗಿ ಬದುಕಿ ಬಾಳಿದ ಶಿವಶರಣರು ಇಂದು ನಮಗೆ ಆದರ್ಶ ಮಯರಾಗಬೇಕು. ಕೆಲವು ತಿಳಿಯಲಾರದ ಸ್ತ್ರೀ

ಶಕ್ತಿಗಳು ಪ್ರಚೋದನಕಾರಿ ಹೇಳಿಕೆಯಿಂದ ತಮ್ಮ ಸಂಘಟನೆಯಲ್ಲಿ ಒಡಕು ಮೂಡಿಸುವಂತ ಪುರುಷರ ವಿರುದ್ಧ ದ್ವೇಷಿಸುವುದು ಸರಿಯಲ್ಲ.

ನಮ್ಮ ದೇಶದಲ್ಲಿ ಮಹಿಳೆಯರಿಗೆ ಸ್ಥಾನ ಸೌಲಭ್ಯಗಳು ಸಿಗಲಿಕ್ಕಿಲ್ಲ. ಆದರೆ ಎಲ್ಲಕ್ಕೂ ಪುರುಷನನ್ನೇ ಹೊಣೆ ಮಾಡುವುದು ತಪ್ಪಾಗಿದೆ. ಕೇವಲ ಇಂತ ಪ್ರಚೋದನಕಾರಿ ಭಾಷಣ, ಬರವಣಿಗೆಯಿಂದ ಸುಖಮಯವಾದ ಕುಟುಂಬಗಳನ್ನು ಒಡೆದು, ಹೋಗುವ ಸಂಭವವಿದೆ. ಇಂತಹ ತಪ್ಪು ವಿಚಾರದಿಂದ ಮೋಸ ಹೋಗುವಂತದ್ದು ಕಂಡು ಬರುತ್ತದೆ. ಸ್ತ್ರೀ ಸಂಘಟನೆಯ ಹೆಸರಿನಲ್ಲಿ ಮುಗ್ದ ಮಹಿಳೆಯರನ್ನು ತಪ್ಪು ದಾರಿಗೆ ಒಯ್ಯುವುದು ಸರಿಯಲ್ಲ ಎಂಬ ವಿಚಾರ ತಿಳಿಯುತ್ತದೆ. ೧೨ ನೇ ಶತಮಾನದ ವಿಚಾರದಲ್ಲಿ ಪುರುಷರು ಶರಣರೆಲ್ಲಾ ಸ್ತ್ರೀ ಸಮುದಾಯಕ್ಕೆ ಮುಕ್ತವಾದ ಸ್ವಾತಂತ್ರ್ಯತೆಯ, ಸಮಾನತೆಯನ್ನು ನೀಡಿ, ಇಡೀ ಜಗತ್ತಿನ ಇತಿಹಾಸದಲ್ಲಿ ಏಕ ಕಾಲದಲ್ಲಿ ಇಷ್ಟು ಜನ ಮಹಿಳೆಯರು, ವಚನ ಸಾಹಿತ್ಯ ರಚನೆ ಮಾಡಲು ಅವಕಾಶ ದೊರೆಯಿತು.

ಇದು ೧೨ ನೇ ಶತಮಾನದ ಸಮಾನತೆ ವಿಚಾರದಲ್ಲಿ ಗಮನಿಸಬೇಕಾದಂತ ಮಾತು. ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮರಂತಹ ಶರಣರು ಎಲ್ಲಾ ಶಿವಶರಣೆಯರನ್ನು ಸಾಕ್ಷಾತ ದೇವಿ ಎಂದು ಅವರಿಗೆ ಸಮಾನತೆ ನೀಡಿದರೂ ಇದರಿಂದ ಅವರ ಮನದ ಭಾವನೆ, ವಚನಗಳ ಮೂಲಕ ಹೊರಹಾಕಲು ಸಾಧ್ಯವಾಯಿತು. ಇದರಿಂದ ಹೆಣ್ಣಿಗೆ ಗಂಡಸರೇ ವಿರೋಧ ಎಂಬ ಹೇಳಿಕೆ ಇಲ್ಲಿ ತಪ್ಪಾಗಿ ಕಂಡು ಬರುತ್ತದೆ. ೧೨ ನೇ ಶತಮಾನದಲ್ಲಿ ಸ್ತ್ರೀಪರವಾದ ವಿಚಾರಗಳು ಹೇಗೆ ಇದ್ದವೂ ಎಂಬುವುದು ಅಂದಿನ ಶರಣರ ವಾಣಿಯ ಮುಖಾಂತರ ಗೊತ್ತಾಗುತ್ತದೆ. ಚೆನ್ನಬಸವಣ್ಣನವರು ತಮ್ಮದೊಂದು ವಚನದಲ್ಲಿ "ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ........ ಕೂಡಲ ಚೆನ್ನ ಸಂಗಯ್ಯನಲ್ಲಿ ಮಹಾದೇವಿ ಅಕ್ಕಳ ಒಂದು ವಚನ ನಿರ್ವಚನ ಕಾಣ, ಸಿದ್ಧರಾಮಯ್ಯ" ಎಂಬ ಮಾತಿನಲ್ಲಿ ಹೆಣ್ಣಿಗೆ ನೀಡಿದಂತ ಸಮಾನತೆ ಗೌರವಗಳು ಎಷ್ಟು ಎಂಬುವುದು ಕಂಡು ಬರುತ್ತದೆ.

ಸಿದ್ಧರಾಮನ ಒಂದು ವಚನದಲ್ಲಿ "ಹೆಣ್ಣು ಹೆಣ್ಣಲ್ಲ, ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂಬುವುದರಲ್ಲಿಯೂ ವಚನಗಳ ರಚನೆಯಲ್ಲಿ ಸ್ತ್ರೀ ಪುರುಷರೆಂಬ ನಿರ್ಬಂಧವಿಲ್ಲ. ಶರಣರು ತಮಗೆ ಸ್ಫೂರ್ತಿ ಬಂದಂತೆ ಅವುಗಳನ್ನು ರಚಿಸಿದ್ದಾರೆ.

'ಶರಣ ಸತಿ ಲಿಂಗ ಪತಿ ಎಂಬರು

ಶರಣ ಹೆಣ್ಣಾ ಪರಿಯಿನ್ನೆಂತು?

ಲಿಂಗ ಗಂಡಾದ ಪರಿಯಿನ್ನೆಂತು?

ನೀರು ನೀರು ಕೂಡಿ ಬೆರೆದಲ್ಲಿ

ಭೇದಿಸಿ ಬೇರೆ ಮಾಡಬಹುದೆ[೨೩]

ಎಂಬ ಅಂಬಿಗರ ಚೌಡಯ್ಯನವರ ವಚನವು ಸ್ತ್ರೀಯರ ಬಗ್ಗೆ ಇರುವ ಸಮಾನತೆ ಸ್ಪಷ್ಟಪಡಿಸುತ್ತದೆ. ಇಂತಹ ಮಾತನ್ನು ಸ್ತ್ರೀ ಸಂಘಟನೆಯ ಕಾರ್ಯಕರ್ತರ ಮುಖಾಂತರ ಈ ನಾಟಕದಲ್ಲಿ ಸಮಾಜಕ್ಕೆ ತಿಳಿಸಿದ್ದಾರೆ. ವಚನಕಾರರು ಆದರ್ಶ ಜೀವನವನ್ನು ಸಮಾಜಕ್ಕೆ ಮಾರ್ಗದರ್ಶನವಾಗಿದೆ. ಅವರ ಬದುಕಿನ ಹೆಜ್ಜೆ ಹೆಜ್ಜೆಯೂ ಆದರ್ಶಮಯವಾಗಿ ಕಂಡು ಬಂದಿದೆ. 'ದಾಂಪತ್ಯ ಜೀವನದಲ್ಲಿ ಸತಿ ಪತಿಯರು ಒಂದೇ ಮನಸ್ಸಿನಿಂದ ತೃಪ್ತಿಯಿಂದ ಲೌಕಿಕ ಜೀವನ ನಡೆಸುತ್ತ ಅಧ್ಯಾತ್ಮ ಮಾರ್ಗದಲ್ಲಿಯೂ ನಡೆದು ಭಕ್ತಿಯಿಂದ ಭಗವಂತನ ಪೂಜೆಗೈದು ಮುಕ್ತಿಯನ್ನು ಪಡೆಯಬೇಕು ಎನ್ನುವ ಅಮರ ಸಂದೇಶ ನೀಡಿದ್ದಾರೆ[೨೪].

'ಪ್ರತಿಯೊಬ್ಬ ವ್ಯಕ್ತಿಯ ಜೀವನದ ಪರಮ ಗುರಿ ಮುಕ್ತಿಯನ್ನು ಹೊಂದುವುದು ಆ ವ್ಯಕ್ತಿ ಸ್ತ್ರೀಯಾಗಿರಲೀ, ಪುರುಷನಾಗಿರಲೀ ಗುರಿ ಮಾತ್ರ ಒಂದೇ ಆಗಿದೆ. ೧೨ ನೇ ಶತಮಾನದಲ್ಲಿ ಬಸವ ಮೊದಲಾದ ಶರಣರು ಸ್ತ್ರೀಯರಿಗೆ ಸರ್ವವಿಧವಾದ ಸ್ವಾತಂತ್ರ್ಯತೆ ನೀಡಿ, ರಕ್ಷಣೆ ಕೊಟ್ಟು, ಅಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರೆಯಲು ಮಾರ್ಗದರ್ಶನ ಮಾಡಿದ್ದರು[೨೫]. ಇಂತಹ ವಿಚಾರದಲ್ಲಿ ಬಸವಾದಿ ಶರಣರೂ ಕೂಡಾ ಪುರುಷರಾಗಿದ್ದು, ಸ್ತ್ರೀಯರಿಗೆ ಸರ್ವಸಮಾನ ಅಧಿಕಾರ ಗೌರವಗಳು ನೀಡಿದ್ದು, ನೋಡಬಹುದಾಗಿದೆ. ಡಾ. ಬಸವರಾಜ ಸಬರದರು ಮಹಿಳಾ ವಿಮೋಚನೆಯಲ್ಲಿ ಮಹಿಳೆಯರ ಮನಪರಿವರ್ತನೆಗೆ ಅನೇಕ ಶರಣರ ವಿಚಾರಗಳನ್ನು ಹೇಳಿ ಅವರ ಮನಸ್ಸನ್ನು ಪರಿವರ್ತಿಸಿ, ಸಮಾಜದಲ್ಲಿ ಹೆಣ್ಣು ಕೀಳಲ್ಲ ಅವಳಿಗೆ ಸಮಾನದ ಹಕ್ಕಿದೆ. ಎಂಬ ವಿಚಾರ ಅತ್ತೆ ಸೊಸೆಯ ಒಂದು ಚರ್ಚೆಯಿಂದ ಹೆಣ್ಣಿನ ಜೀವನ ಒಂದು ಸಮಸ್ಯೆಗೆ ಈ ನಾಟಕ ಪರಿಹಾರ ಕಂಡಿದೆ ಎಂಬುವುದು ಸಂಶೋಧನೆಯಿಂದ ಕಂಡು ಬರುತ್ತದೆ. ಪುನರ್ ಜನ್ಮದ ವಿಚಾರವಾಗಲೀ ಮೂಢನಂಬಿಕೆಯಿಂದ ಹೊರಬರಬೇಕೆಂದು ಈ ನಾಟಕದಲ್ಲಿ ತಿಳಿಯುತ್ತದೆ.

ಡಾ. ಬಸವರಾಜ ಸಬರದರ ತಮ್ಮ ನಾಟಕಗಳಲ್ಲಿ ಸಮಾಜದ ನೈಜ್ಯವಾದ ಸಮಸ್ಯೆಗಳನ್ನು ಮುಂದಿಟ್ಟುಕೊಂಡು, ಅವುಗಳಿಗೆ ಶಾಶ್ವತ ಪರಿಹಾರ ಕಂಡು ಕೊಳ್ಳುವ ಪ್ರಮಾಣೀಕ ಪ್ರಯತ್ನ ಮಾಡಿದ್ದಾರೆ. ಮಹಿಳಾ ವಿಮೋಚನೆಯ ಕೊನೆಯ ಭಾಗದಲ್ಲಿ ಬಡ ಕುಟುಂಬದ ಸಮಸ್ಯೆಯಿಂದಾಗಿ ಸ್ತ್ರೀಯರಿಗೆ ಶಿಕ್ಷಣ ಅಭ್ಯಾಸದಿಂದ ದೂರ ಇಡುವಂತದ್ದು ಮತ್ತು ಹೆಣ್ಣು ಮಗಳು ಗಂಡನ ಮನೆಗೆ ಹೋಗುವಳು ಅವಳಿಗೆ ಶಿಕ್ಷಣದ ಅವಶ್ಯಕತೆಯೇ ಇಲ್ಲ ಎಂಬ ಭಾವನೆಗಳು ಮೂಡಿ ಬಂದಂತದ್ದು, ಮನೆ ಒಡಿಯನಾದ ವ್ಯಕ್ತಿ ತಾನು ಜವಾಬ್ದಾರದಿಂದ ಸಂಸಾರ ಸಾಗಿಸಬೇಕು, ಕುಡಿಯುವ ದುಷ್ಟ ಚಟದಿಂದ ಜೀವನಗಳು ಹಾಳಾಗುತ್ತವೆ ಎಂಬುವುದು ಈ ನಾಟಕದ ಅಧ್ಯಯನದಿಂದ ಗೊತ್ತಾಗುತ್ತದೆ.

ಒಟ್ಟಿನಲ್ಲಿ ಡಾ. ಬಸವರಾಜ ಸಬರದರು ನಾಟಕಗಳ ಆಶಯ ಸುಖಿ ಮತ್ತು ಪರಿವರ್ತನೆ ಸಮಾಜದ ನಿರ್ಮಾಣವಾಗಬೇಕು. ಅವುಗಳಿಗೆ ೧೨ ನೇ ಶತಮಾನದ ಶಿವಶರಣ ಶರಣೆಯರು ಜೀವನವು ಆದರ್ಶಪ್ರಾಯವಾಗಿಟ್ಟುಕೊಳ್ಳುವಂತದ್ದು, ತುಂಬಾ ಮಹತ್ವದ್ದಾಗಿದೆ. ಶಿವಶರಣರು ತಮ್ಮ ಬದುಕನ್ನು ಸಮಾಜಕ್ಕೆ ಉತ್ತಮ ಮಾರ್ಗದರ್ಶನವಾಗಲೀ ಎಂಬ ಉದ್ದೇಶ ಇರಲಿಲ್ಲ. ಅವರ ಸಹಜ ಬದುಕೇ ಹಾಗಿತ್ತು. ಅದು ನಮಗೆ ಆದರ್ಶಮಯವಾಗಿ ಕಂಡು ಬರುತ್ತದೆ. ಅವರಿಗೆ ನಾವು ಹೆಜ್ಜೆ ಹೆಜ್ಜೆಗೂ ನೆನೆಯುವಂತೆ ಬಾಳಿ ಬದುಕಿದ್ದಾರೆ. ಇದರಿಂದ ಸಮಾಜದಲ್ಲಿ ಒಂದು ದೊಡ್ಡ ಪರಿವರ್ತನೆ ಕಾಣುವಂತ ಸಾಧ್ಯಗಳಿವೆ ಎಂಬ ಅಭಿಪ್ರಾಯ ಈ ನಾಟಕದಲ್ಲಿ ಮೂಡಿ ಬಂದಿದೆ.

**ಮಹಿಳಾ ವಿಮೋಚನೆ ಪಾತ್ರಗಳು:**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳಾಗಿ ಮೇಳ, ಸಂಚಾಲಕಿ, ಸ್ತ್ರೀವಾದಿ ಲೇಖಕಿ, ಕಾರ್ಯಕರ್ತೆ, ಬಸವಣ್ಣ, ಚೆನ್ನಬಸವಣ್ಣ, ಸಿದ್ಧರಾಮಯ್ಯ, ದಾಸಿಮಯ್ಯ, ಅಲ್ಲಮಪ್ರಭು, ಅಕ್ಕಮಹಾದೇವಿ, ಆಯ್ದಕ್ಕಿ ಲಕ್ಕಮ್ಮ, ದುಗ್ಗಳೆ, ನೀಲಾಂಬಿಕೆ, ಅಕ್ಕನಾಗಮ್ಮಾ, ಅತ್ತೆ, ಸೊಸೆ, ಗಂಡ, ಹೆಂಡತಿ ಇವು ಪ್ರಮುಖವಾದ ಪಾತ್ರಗಳಾಗಿವೆ.

**ಭಾಷೆ:**

ಈ ನಾಟಕದಲ್ಲಿನ ಭಾಷೆ ಅಕ್ಷರಸ್ಥರ ಭಾಷೆಯಾಗಿದ್ದು, ಈ ಭಾಷೆ ಸರಳವಾಗಿ ಓದುಗರಿಗೆ ಅರ್ಥವನ್ನು ನೀಡಬಲ್ಲ ಭಾಷೆಯಾಗಿದೆ. ವಚನಗಳ ಬಳಕೆ ಮೂಲಕ ಭಾಷೆಗೆ ಇನ್ನೂ ಹೆಚ್ಚಿನ ಮೆರಗು ಬಂದಿದೆ.

## ಸಿದ್ಧಾರ್ಥ:

ಈ ನಾಟಕದಲ್ಲಿ ಸಿದ್ಧಾರ್ಥ ಬುದ್ಧ ಹೇಗಾದನೆಂಬುವುದು ಕಂಡು ಬರುತ್ತದೆ. ಮಧ್ಯರಾತ್ರಿಯಲ್ಲಿ ಎದ್ದು ಹೋದವರಲ್ಲ ಬುದ್ಧನಾಗಲು ಸಾಧ್ಯವಿಲ್ಲ ಎಂಬುವುದು ಕಂಡು ಬರುತ್ತದೆ. ಬುದ್ಧ ತನ್ನ ಸಮಾಜದಲ್ಲಿ ಕಂಡ ಸಮಸ್ಯೆಗಳು ಬಡವರ ಭಿಕ್ಷುಕರ, ಕೂಲಿ ಕಾರ್ಮಿಕರ ಮನುಷ್ಯನ ಪರವಾದ ಚಿಂತನೆಗಳು ಬುದ್ಧನಲ್ಲಿ ಮೂಡುವವು. ಇಂತಹ ಸಂದರ್ಭದಲ್ಲಿ ಬುದ್ಧ ತನ್ನ ರಾಜ್ಯ ವೈಭವವನ್ನ ಬಿಟ್ಟು, ಸುಖ ಸಂತೋಷ ಹೆಂಡತಿ ಮಗನನ್ನು ಬಿಡುವ ಪರಿಸ್ಥಿತಿಗೆ ಅವನ ವಿಚಾರಗಳು ಬಂದಿದ್ದವು.

ಯುದ್ಧದ ಬರ್ಬರತೆಯ ದೃಶ್ಯ, ರಣರಂಗದಲ್ಲಿ ಹರೆಯುವ ರಕ್ತ ಯುದ್ಧದಿಂದ ಎಷ್ಟೋ ಜನರ ಅಂಗವಿಕಲತೆ, ವಿಧವೆ ಮಕ್ಕಳು ತಬ್ಬಲಿಯಾಗುವುದು, ಕುಟುಂಬಗಳು ನಿರ್ಗತಿಯಾಗುವುದು, ಇವುಗಳಿಗೆ ಕಾರಣವೇನು ಅದು ಕೇವಲ ಸ್ವಾರ್ಥ ವೈಭವಕ್ಕಾಗಿ ಇಡೀ ಮಾನವ ಕುಲವನ್ನೇ ಧ್ವಂಸಗೊಳಿಸುವಂತ ಮುಗ್ಧ ಜನರ ಸಾಯುವಂತ ಇಂತಹ ಸ್ಥಿತಿಯಿಂದಾಗಿ ರಾಜ್ಯದಲ್ಲಿ ಹೇಗೆ ಶಾಂತಿ ನೆಮ್ಮದಿ ಇರಲು ಸಾಧ್ಯವೆಂಬ ವಿಚಾರಗಳು ಅವನು ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ತನ್ನ ಜೀವನವನ್ನು ತ್ಯಾಗ ಮಾಡಿ, ಕಾಡಿಗೆ ತಪಸ್ಸಿಗಾಗಿ ಹೊರಟ. ಸಿದ್ಧಾರ್ಥನು ಕಾಡಿಗೆ ಹೋದಾಗ ಅವನಿಗೆ ಪ್ರಕೃತಿಯ ಅನೇಕ ಲೀಲೆಗಳು ಆದರ್ಶಗಳಾದವು. ಅವುಗಳಿಂದ ಅವನು ಹೊಸ ಅನುಭವ ಪಡೆದನು.

ಮರ, ಬೆಳ್ಳಿ, ಹೂ, ಕಾಯಿ, ನದಿ, ನೀರು, ಗುಡ್ಡ, ಬೆಟ್ಟ ಇವುಗಳಲ್ಲಿ ಯಾವುದಕ್ಕೋ ಹಮ್ಮು ಬಿಮ್ಮು ಯಾವುದೂ ಇಲ್ಲ. ಅವುಗಳ ತಮ್ಮಷ್ಟಕ್ಕೇ ತಾವೇ ತಮ್ಮ ಕ್ರಿಯೆಯನ್ನು ಮಾಡುತ್ತಿರುತ್ತವೆ. ಇದರಿಂದ ವಿಚಾರವಂತ ಮನುಷ್ಯ ಪಾಠ ಕಲಿಯಬೇಕಾದದ್ದು, ಬಹಳಷ್ಟಿದೆ ಎಂಬುವುದು ಬುದ್ಧನಿಗೆ ಕಂಡು ಬರುತ್ತದೆ. ಬುದ್ಧನು ಪುರೋಹಿತ ಪದ್ಧತಿಯ ಹೋಮ ಹವಣಗಳನ್ನು ತೀವ್ರವಾಗಿ ವಿರೋಧಿಸುತ್ತಿದ್ದನು. ನಮ್ಮ ರಾಷ್ಟ್ರದಲ್ಲಿ ಎಷ್ಟೋ ಜನರಿಗೆ ಊಟದ ಗತಿ ಇಲ್ಲದೇ ಇರುವಂತಹ ಸಂದರ್ಭ ಇದ್ದಾಗ, ತುಪ್ಪ, ಹಾಲು, ಹಣ್ಣು, ಬಟ್ಟೆಗಳನ್ನು ದಹಿಸುವುದು ಸರಿಯಲ್ಲ ಎಂಬ ವಿಚಾರ ಬುದ್ಧನಿಗೆ ಮೂಡಿ ಬರುತ್ತದೆ. ಇದರಿಂದ ಬುದ್ಧನು ಸಮಾಜದಲ್ಲಿ ಸಾಕಷ್ಟು ಪರಿವರ್ತನೆ ಮಾಡುವ

ನಿಟ್ಟಿನಲ್ಲಿ ರಾಜ್ಯ ಆಡಳಿತದಲ್ಲಿರುವ ಅಹಂ ಭಾವನೆಯನ್ನು ತೊಡೆದು ಹಾಕುವಲ್ಲಿ ಯಶಸ್ವಿ ಕಾಣುತ್ತಾನೆ.

ಈ ನಾಟಕವು ಸಮಾಜದ ಪರಿವರ್ತನೆಗೆ ಜನರಲ್ಲಿ ವಿಶ್ವಾಸ ಮೂಡಿಸುವ ಜನರನ್ನು ಸ್ವಮಾರ್ಗ ನಡೆಸುವ ಮತ್ತು ಎಲ್ಲದಕ್ಕೂ ಆಸೆ ದುಃಖಕ್ಕೆ ಮೂಲವೆಂಬ ವಿಚಾರ ತನ್ನ ತಪಸ್ಸಿನಲ್ಲಿ ಕಂಡು, ಅದು ಜನರಿಗೆ ತಿಳಿಹೇಳುತ್ತಾ ಇಡೀ ಮನುಕುಲದ ಉದ್ಧಾರವನ್ನೇ ಮಾಡುವಂತದ್ದು, ಕಂಡು ಬರುತ್ತದೆ. ಬುದ್ಧ ತನ್ನ ಸಂದೇಶದಲ್ಲಿ ಹುಟ್ಟಿನಿಂದಲೂ ಯಾರೋ ಕೆಟ್ಟವರಿರುವುದಿಲ್ಲ, ಸ್ವಾರ್ಥಿಗಳಿರುವುದಿಲ್ಲ, ನೀಚನಾಗಿರುವುದಿಲ್ಲ. ನಮ್ಮ ಪರಿಸರ ನಮ್ಮ ಸಂಸ್ಕಾರಗಳು ನಮ್ಮನ್ನು ಆ ರೀತಿಯಾಗಿ ಬೆಳೆಸುತ್ತವೆ.

ಆದರಿಂದ ನಾವು ನಮ್ಮ ಪರಿಸರವನ್ನು ನಿರ್ಮಲವಾಗಿ ಸ್ವಚ್ಛಂದವಾಗಿ ಇಡಬೇಕು ಎಂಬ ಕಳಕಳಿಯ ಮಾತುಗಳು ಬುದ್ಧನು ಸಮಾಜಕ್ಕೆ ಹೇಳುತ್ತಾನೆ. ಮನುಷ್ಯನ ಮನಸ್ಸುಗಳು ಶುದ್ಧಭಾವದಿಂದ ತುಂಬಿರಬೇಕು. ಹಿಂಸೆ, ಸ್ವಾರ್ಥ, ದುರಾಸೆಯಿಂದ ಮನುಷ್ಯ ಹಾಳಾಗಿ ಹೋಗುತ್ತಾನೆ. ಶಾಂತಿಗಾಗಿ, ಪ್ರೀತಿಗಾಗಿ, ಸಮಾನತೆಗಾಗಿ, ಮಾನವೀಯತೆಗಾಗಿ ಮಿಡಿಯುವಂತದ್ದೇ ನಿಜವಾದ ಮಾನವನ ಧರ್ಮ ಇದೆ ಧ್ಯೆಯದಿಂದ ಕೂಡಿರಬೇಕು ಎಂಬ ಸಂದೇಶವನ್ನು ನಾಟಕ ಸಾರಿ ಹೇಳುತ್ತದೆ. ನಿಜವಾದ ಜ್ಞಾನವೆಂದರೆ ಮನುಷ್ಯನ ನೋವುಗಳಿಗೆ ಸಮಾಧಾನ ಹುಡುಕುವದಾಗಿದೆ. ಎಂಬುವುದು ಈ ನಾಟಕ ಸಮಾಜಕ್ಕೆ ಮಾರ್ಗದರ್ಶನ ಮಾಡಿದೆ.

**ಸಿದ್ಧಾರ್ಥ ನಾಟಕದ ಪಾತ್ರಗಳುಃ**

ಈ ನಾಟಕದಲ್ಲಿ ಪ್ರಮುಖ ಪಾತ್ರಗಳೆಂದರೆ, ಸಿದ್ಧಾರ್ಥ, ಯಶೋಧರ, ರಾಹುಲ, ಸೇವಕ, ಕಾವಲುಗಾರ, ಚನ್ನ, ವಿಧವೆ, ಅಜಾತ ಶತ್ರು, ಅಮಾತ್ಯ, ಅಮ್ರಪಾಲಿ ಪ್ರಮುಖವಾದ ಪಾತ್ರಗಳಾಗಿವೆ. ಈ ಪಾತ್ರಗಳು ತಮ್ಮ ಕಾರ್ಯಾನುಸಾರವಾಗಿ ಮಾತಾಡುವಂತದ್ದು, ಚರ್ಚೆ ಮಾಡುವಂತದ್ದು ತುಂಬಾ ಆಕರ್ಷಣೀಯವಾಗಿವೆ.

ಭಾಷೆಃ

ಇಲ್ಲಿನ ಭಾಷೆ ಸರಳವಾಗಿ ಅರ್ಥವಾಗುವ ರೀತಿಯಲ್ಲಿ ಭಾಷೆಯನ್ನು ಬಳಸಲಾಗಿದೆ. ಆಡಳಿತದಲ್ಲಿ ಬಳಸುವ ಭಾಷೆಯ ಲಕ್ಷಣಗಳು ಈ ನಾಟಕದಲ್ಲಿ ಹೆಚ್ಚು ಕಂಡು ಬರುತ್ತವೆ.

## ಬೆಳಕಿನೆಡೆಗೆ:

ಈ ನಾಟಕ ಗ್ರಾಮೀಣ ಬದುಕಿನ ಮೂಢನಂಬಿಕೆ, ಕಂದಾಚಾರಗಳಿಂದ ಕೂಡಿದ್ದ ವ್ಯವಸ್ಥೆಯನ್ನು ಮತ್ತು ಗ್ರಾಮೀಣ ಪ್ರದೇಶದ ಪಂಚರು ಅವರ ಆಪ್ತ ವ್ಯಕ್ತಿಗಳು, ಪೂಜಾರಿಗಳ ದುರ್ನಡತೆಯನ್ನು ಒಬ್ಬ ಶಿಕ್ಷಿತ ವ್ಯಕ್ತಿಯಿಂದ ವ್ಯವಸ್ಥೆಯ ಬದಲಾವಣೆಯನ್ನು ಕಂಡು ಬರುತ್ತದೆ. ಶಿಕ್ಷಣದಿಂದ ಎಷ್ಟು ಉತ್ತಮ ಕಾರ್ಯಗಳು ನಡೆಯುತ್ತವೆ ಮತ್ತು ಸಾಮಾಜಿಕವಾದ ಬದಲಾವಣೆಗಳು ಪರಿವರ್ತನೆಗಳು ಕಂಡು ಬರುತ್ತವೆ ಎಂಬುವುದು ಈ ನಾಟಕದಲ್ಲಿ ಮೂಡಿ ಬಂದಿದೆ.

ಗ್ರಾಮೀಣ ಭಾಗದ ಮುಗ್ಧ ಜನರನ್ನು, ಬಡವರನ್ನು ಉಳ್ಳವರು ಹೇಗೆ ವ್ಯವಸ್ಥಿತವಾಗಿ ಸುಲಿಯುತ್ತಿದ್ದಾರೆ. ಮತ್ತು ಅವರಿಗೆ ದೇವರ ಹೆಸರಿನಲ್ಲಿ ಲೂಟಿ ಮಾಡುತ್ತಿದ್ದಾರೆ. ಪರಸ್ತ್ರೀಯರ ಬಗ್ಗೆ ಎಂತ ಅಭಿಪ್ರಾಯವನ್ನು ಹೊಂದಿದ್ದಾರೆ ಎಂಬ ವಿಚಾರಗಳು ನಾಟಕದಲ್ಲಿ ಕಂಡು ಬಂದಿವೆ. ಗ್ರಾಮ ಪಂಚಾಯತಿಯ ಪಂಚರು ಮಾಡಬೇಕಾದ ಅಭಿವೃದ್ಧಿ ಕಾರ್ಯಗಳನ್ನು ಬಿಟ್ಟು, ಊರು ಹಾಳು ಮಾಡುವಂತ ವ್ಯವಸ್ಥೆಯನ್ನು ಈ ನಾಟಕ ಮೂಡಿಸುತ್ತದೆ. ಒಂದು ಗ್ರಾಮದಲ್ಲಿ ಒಬ್ಬ ಶಿಕ್ಷಣ ಪಡೆದ ವ್ಯಕ್ತಿ ಇದ್ದರೂ ಆ ಊರನ್ನು ಎಷ್ಟರ ಮಟ್ಟಿಗೆ ಬದಲಾವಣೆ ಮಾಡಬಹುದು, ಮೂಢನಂಬಿಕೆಯಿಂದ ಜನರನ್ನು ಜಾಗೃತಗೊಳಿಸಿ, ಅವರ ಬದುಕನ್ನು ಹಸುನ ಮಾಡಬಹುದು ಎಂಬ ವಿಚಾರಗಳು ಈ ನಾಟಕದಲ್ಲಿ ಮೂಡಿಬರುತ್ತವೆ.

ಒಬ್ಬ ಪ್ರಮಾಣಿಕವಾಗಿ ಆರೋಗ್ಯ ಅಧಿಕಾರಿಗಳು ಸೇವೆ ಮಾಡುವುದರಿಂದ ಎಷ್ಟೋ ಜನರ ಸಾವು ನೋವುಗಳನ್ನು ತಡೆಗಟ್ಟಬಹುದು. ಹಳ್ಳಿಯಲ್ಲಿಯೂ ಕೂಡಾ ಕಾನೂನು ಬಾಹೀರವಾದ ಕೆಲಸಗಳು ಹೇಗೆ ನಡೆಯುತ್ತಿವೆ ಎಂಬುವುದು ಕಳ್ಳ ಬಟ್ಟಿ ಸರಾಯಿ ದಂಧೆಯಿಂದ ಗೊತ್ತಾಗುತ್ತದೆ. ಈ ಎಲ್ಲಾ ವಿಷಯ ಒಬ್ಬ ಶಿಕ್ಷಣ ಪಡೆದ ವ್ಯಕ್ತಿಯಿಂದ ಬೆಳಕಿಗೆ ಬರುವಂತದ್ದು, ಇದು ಶಿಕ್ಷಣದ ಮಹತ್ವವನ್ನು ಸಾರಿ ಹೇಳುತ್ತದೆ. ಒಟ್ಟು ಈ ನಾಟಕದಲ್ಲಿ ಗ್ರಾಮೀಣ ಜನರ ಬದುಕಿನ ಸಮಸ್ಯೆಗಳು ಅವರ ಬದುಕು ಎಂತಹ ಸ್ಥಿತಿಯಲ್ಲಿ ಸಾಗುತ್ತದೆ. ಅದಕ್ಕೆ ಯಾರು ಹೊಣೆಯಾಗಿದ್ದಾರೆ. ಇದರಿಂದ ಹೊರ ಬರಲು ಜನರು ಎಂತಹ ಶಿಕ್ಷಣವನ್ನು ಪಡೆಯಬೇಕು, ಎಂತಹ ವ್ಯಕ್ತಿಗಳನ್ನು ಜನಪ್ರತಿನಿಧಿಯಾಗಿ ಆರಿಸಬೇಕು ಎಂಬ ವಿಚಾರಗಳು ನಾಟಕ ಸಮಾಜಕ್ಕೆ ತಿಳಿಹೇಳುತ್ತದೆ. ಸಾವಿರಾರು ವರ್ಷದಿಂದ ಮೂಢನಂಬಿಕೆಯ ಬೇರುಗಳನ್ನು ಶಿಕ್ಷಣ ಪಡೆದ ವ್ಯಕ್ತಿ ಹೇಗೆ ಅವೆಲ್ಲವನ್ನು

ನಿರ್ಮೂಲನೆ ಮಾಡುವಂತದ್ದು, ಮತ್ತು ಸಮಾಜ ಪರಿವರ್ತನೆಗೆ ಕಾರಣನಾಗುವನು ಎಂಬುವುದು ನಾಟಕ ತಿಳಿಸಿಕೊಡುತ್ತದೆ.

**ಬೆಳಕಿನೆಡೆಗೆ ನಾಟಕದ ಪಾತ್ರಗಳುঃ**

ಈ ನಾಟಕದಲ್ಲಿ ಪ್ರಮುಖವಾಗಿ ಈ ಕೆಳಕಂಡ ಪಾತ್ರಗಳಿವೆ. ಸೂತ್ರಧಾರ, ರಾಜು, ಗೌಡಶಾನಿ, ದುಂಡುರಾವ, ಕರಿನಿಂಗ, ಪುಜಾರಿ, ನರಸಬಾಯಿ, ಮರಿಯಾ ಪ್ರಮುಖ ಪಾತ್ರಗಳಾಗಿವೆ. ಈ ಪಾತ್ರಗಳು ತಮ್ಮ ವಿಚಾರಗಳು ಪಾತ್ರಗಳ ಅನುಗುಣವಾಗಿ ಕಾರ್ಯವನ್ನು ನಿರ್ವಹಿಸುತ್ತದೆ.

**ಭಾಷೆঃ**

ಈ ನಾಟಕಗಳಲ್ಲಿ ಭಾಷೆ ಸರಳವಾಗಿ ಸುಂದರವಾಗಿ ಓದುಗರಿಗೆ ತಿಳಿಯುವಂತೆ ಮೂಡಿಬಂದಿದೆ. ಗ್ರಾಮೀಣ ಭಾಷೆಯ ಸೊಗಡು, ಆಧುನಿಕ ಲೇಪನದೊಂದಿಗೆ ಇಲ್ಲಿನ ಭಾಷೆ ಆಕರ್ಷಣೀಯವಾಗಿ ಮೂಡಿ ಬಂದಿದೆ. ಒಟ್ಟಿನಲ್ಲಿ ಈ ನಾಟಕಗಳನ್ನು ಓದುಗರಿಗೆ ಭಾಷೆ ಸರಳವಾಗಿ ಅರ್ಥವಾಗುವಂತದ್ದಾಗಿದೆ.

# ದೊಡ್ಡಾಟ

## (ನರಬಲಿ)

'ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಬಳಕೆಯಲ್ಲಿರುವ ಬಯಲಾಟ ಹಿಂದಿನಿಂದಲು ನಡೆದುಕೊಂಡು ಬಂದಿರುವ ಸಮಸ್ಟಿಕಲೆ. ಜನರು ಬಯಲಿನಲ್ಲಿ ಒಂದು ವೇದಿಕೆಯನ್ನು ನಿರ್ಮಿಸಿಕೊಂಡು ಧಾರ್ಮಿಕ ಅಥವಾ ಇತರ ಸಮಯದಲ್ಲಿ ಮನೋರಂಜನೆಗಾಗಿ ಬಯಲಾಟಗಳನ್ನು ಪ್ರದರ್ಶಿಸುತ್ತಿದ್ದರು. ದೊಡ್ಡಾಟದಲ್ಲಿ ಕಥಾವಸ್ತು, ಪೌರಾಣಿಕ ಹಾಗೂ ಕಾಲ್ಪನಿಕ ಕಥೆಗಳನ್ನು ಒಳಗೊಂಡಿರುತ್ತದೆ. ಇದರಲ್ಲಿ ರೌದ್ರ, ವೀರ, ಭಕ್ತಿ, ಹಾಸ್ಯ, ಭಯಾನಕ ರಸಗಳು ಬರುತ್ತವೆ. ದೊಡ್ಡಾಟದ ಮಾತು ಸಂಸ್ಕೃತ ಮಿಶ್ರಿತ ಪ್ರಾಸ ಬದ್ಧ ಬಿಗುವಿನ ಶೈಲಿ ಹಾಡುಗಳಲ್ಲಿ ಕಾವ್ಯಾಂಶ ಕಡಿಮೆ. ಉತ್ತರ ಕರ್ನಾಟಕದಲ್ಲಿ ಪ್ರದಾನವಾಗಿರುವ ದೊಡ್ಡಾಟ ಇಡೀ ರಾತ್ರಿ ನಡೆಯುತ್ತದೆ. ದೊಡ್ಡಾಟ ಜಾನಪದದ ಪ್ರಾತಿನಿಧಿಕ ಪ್ರದರ್ಶಕ ಕಲೆಯಾಗಿದೆ. ದೊಡ್ಡಾಟ ವಿಜಯನಗರ ಸಾಮ್ರಾಜ್ಯದ ಕಾಲದಿಂದಲೂ ಮುಖ್ಯ ಕಲೆಯಾಗಿ ಇಂದಿಗೂ ಉಳಿದು ಬಂದಿದೆ[೨೬].

'ಜನಪದ ರಂಗದರ್ಶನದ ಪ್ರಮುಖ ಪ್ರಕಾರ ಈ ಬಯಲಾಟಗಳದು. ಮುಖ್ಯವಾಗಿ ದೊಡ್ಡಾಟ, ಯಕ್ಷಗಾನ ಹಾಗೂ ಸಣ್ಣಾಟಗಳೆಂದು ಈ ವರೆಗೂ ಪ್ರಾದೇಶಿಕ ವೈಶಿಷ್ಟ್ಯಗಳೊಂದಿಗೆ ಪ್ರಸಿದ್ಧಿಹೊಂದಿದೆ. ಉತ್ತರ ಕರ್ನಾಟಕದಲ್ಲಿ ಈ ಬಯಲಾಟವನ್ನು ಬಹುತೇಕವಾಗಿ ಬಯಲಾಟ, ದೊಡ್ಡಾಟಗಳೆಂದು ಹೆಸರಿಸುತ್ತಾರೆ. ಅಲ್ಲದೇ ಅಟ್ಟದ ಆಟ, ಮೇಳದ ಆಟ, ಮತ್ತು ಮೂಡಲ ಪಾಯವೆಂಬ ಪರ್ಯಾಯ ಹೆಸರಿಂದಲೂ ಕರೆಯುತ್ತಾರೆ[೨೭].

'ಸರ್ವ ಸಾಮಾನ್ಯವಾಗಿ ಮೂಡಲ ಹರಿಯುವವರೆಗೆ ಆಡಿದರೂ ಮುಗಿಯದ ದೊಡ್ಡ ಕಥನವುಳ್ಳ ಈ ಆಟಗಳನ್ನು ಮೂಡಲಪಾಯ ಮತ್ತು ದೊಡ್ಡಾಟಗಳೆಂದು ಕರೆಯುವುದರಲ್ಲಿಯೇ ಈ ಆಟದ ಔಚಿತ್ಯ ಅಡಗಿದೆ. ದೊಡ್ಡಾಟಗಳಲ್ಲಿ ಬರುವ ಅಲೌಕಿಕ ಸನ್ನಿವೇಶ ಮತ್ತು ದೈತ್ಯ ರಾಕ್ಷಸ, ವೀರಾಧಿ ವೀರ ದಾನವ ಮುಂತಾದ ಅಮಾನುಷ್ಯ ಮತ್ತು ಅತೀಮಾನುಷ್ಯ ಅದ್ಭುತ ಪಾತ್ರ ಸೃಷ್ಟಿಯನ್ನು ಗಮನಿಸಿದರೆ ಅಂತ ದೊಡ್ಡವರನ್ನು ಕುರಿತು ಆಟವೇ ದೊಡ್ಡಾಟವೆಂದು ಕರೆಸಿಕೊಂಡಿರುಬೇಕು[೨೮].

---

೨೬. ಕನ್ನಡ ಸಾಹಿತ್ಯ ಕೋಶ-ರಾಜಪ್ಪ ದಳವಾಯಿ ಪುಟ-೪೮೩ ೨೦೦೩.
೨೭. ಜಾನಪದ ಸಾಹಿತ್ಯ ದರ್ಶನ ಭಾಗ-೩, ಸಂಪಾದಕ ಡಾ. ಎಂ.ಎಸ್. ಸುಂಕಾಪುರ ಪುಟ-೪೩.
೨೮. ಜಾನಪದ ಸಾಹಿತ್ಯ ದರ್ಶನ ಭಾಗ-೩, ಸಂಪಾದಕ ಡಾ. ಎಂ.ಎಸ್. ಸುಂಕಾಪುರ ಪುಟ-೪೩.

'ದೊಡ್ಡಾಟದ ಹೆಸರಿನಂತೆಯೇ ಆಟ್ಟ ಪಾತ್ರಗಳ ಸಂಖ್ಯೆ ವೇಷ ಭೂಷಣಗಳು ಸಂಗೀತ ಎಲ್ಲವೂ ದೊಡ್ಡದಾಗಿ ಕಾಣುತ್ತದೆ. ಗಣೇಶ, ಸರಸ್ವತಿ, ಈಶ್ವರ, ಪಾರ್ವತಿ ಯಾರಾದರೊಂದು ದೇವತೆಯ ಸ್ತುತಿಯೊಂದಿಗೆ ಆಟವು ಪ್ರಾರಂಭವಾಗುತ್ತದೆ. ಈ ಆಟವೆಲ್ಲಾ ಸೂತ್ರಧಾರ ಅಥವಾ ಸಾರತಿಯೇ ಕಥೆಯನ್ನು ಪಾತ್ರಗಳ ಜೊತೆ ಸಂಭಾಷಿಸುತ್ತಾ ಸಾಗುತ್ತಾರೆ. ನಾಟಕ ರಚನೆಯು ಗೀತ ಹಾಗೂ ಗದ್ಯಮಯವಾಗಿರುತ್ತದೆ. ಹಿಮ್ಮೇಳ, ಮುಮ್ಮೇಳಗಳು ಹಾಡಲು ಸಂಗೀತ ಬಾರಿಸಲು ಇರುತ್ತವೆ. ದೊಡ್ಡಾಟದಲ್ಲಿ ಮುಖವೀಣೆ (ಸನಾದಿ), ಮೃದುಂಗ (ಮುದ್ದಳೆ), ತಾಳ, ಹಾರ್ಮೋನಿಯಂ, ತಬಲಾ, ಹಲಗೆ, ರಣಹಲಿಗೆ ಮುಂತಾದವುಗಳನ್ನು ಉಪಯೋಗಿಸುತ್ತಾರೆ. ವೀರ, ರೌದ್ರ ಸನ್ನಿವೇಶದಲ್ಲಿ ಶಬ್ಬಾಶ! ಶಬ್ಬಾಶ! ಎಂದು ಕಿರುಚುತ್ತಾರೆ. ನೃತ್ಯವನ್ನು ಗಂಭೀರ ರೌದ್ರತೆಯಿಂದ ಮಾಡುತ್ತಾರೆ'[೨೯].

ಹೀಗೆ ಮೂಡಲಪಾಯ, ದೊಡ್ಡಾಟ, ರಂಗಸಜ್ಜಿಕೆ, ಸಂಭಾಷಣೆ, ಅಭಿನಯ ಮತ್ತು ಸಂಗೀತ ಮುಂತಾದವುಗಳಲ್ಲಿ ಪಡುವಲಪಾಯಿಕ್ಕಿಂತ ಗಮನಾರ್ಹವಾದ ವ್ಯತ್ಯಾಸಗಳನ್ನೊಳಗೊಂಡು ಸಾಂಸ್ಕೃತಿಕ ಪರಂಪರೆದೊಂದಿಗೆ ಪ್ರಾಚೀನತಮವಾದ ಅದೇಷ್ಟೋ ಅಂಶಗಳನ್ನೊಳಗೊಂಡಿದೆ. ಯಕ್ಷಗಾನದಂತೆ ದೊಡ್ಡಾಟ ಯಾವ ಇತರ ಕಲೆ ಸಂಗೀತಗಳ ಪ್ರಭಾವಕ್ಕೆ ಒಳಗಾಗದರಿಂದ ಪ್ರಾಚೀನತೆಯನ್ನು ಉಳಿಸಿಕೊಳ್ಳುತ್ತಾ ಬಂದಿರುವುದರಿಂದಲೂ ಯಕ್ಷಗಾನಕ್ಕಿಂತ ಅದೇ ಪ್ರಾಚೀನವೆಂಬ ವಿದ್ವಾಂಸರ ಊಹೆ ಸತ್ಯಪೂರ್ಣವೆನಿಸುತ್ತದೆ. 'ಜಗತ್ತಿನ ಇತರ ಬಯಲಾಟ ಪ್ರಕಾರಗಳೊಂದಿಗೆ ಹೋಲಿಸಿ ನೋಡುವಷ್ಟು ಸ್ವರೂಪ ಸಾಮ್ಯತೆಯನ್ನು ಹೊಂದಿದ ದೊಡ್ಡಾಟ ನಿಜಕ್ಕೂ ಪ್ರಭಾವಕಾರಿಯಾದದ್ದು'[೩೦].

## ನರಬಲಿಃ

ಡಾ. ಬಸವರಾಜ ಸಬರದರು ಕನ್ನಡ ಬಂಡಾಯ ಸಾಹಿತ್ಯ ಚಳುವಳಿಯ ಪ್ರಮುಖ ಲೇಖಕರಲ್ಲಿ ಒಬ್ಬರಾಗಿದ್ದಾರೆ. ಕವಿಯಾಗಿ, ವಿಮರ್ಶಕರಾಗಿ, ಲೇಖಕರಾಗಿರುವಂತೆಯೇ ನಾಟಕಕಾರರಾಗಿದ್ದಾರೆ. ಇವರ ನಾಟಕ ಉಡುಪಿಯವರ ನಾಟಕ ರಚನಾ ಸ್ಪರ್ಧೆಯಲ್ಲಿ ಬಹುಮಾನವನ್ನು ಪಡೆದಿರುತ್ತದೆ. ಇವರ ನರಬಲಿ ನಾಟಕ ಬಂಡಾಯ ಮನೋಭಾವನೆಯಿಂದ ಜನರ ಜೀವನದ ನೈಜ್ಯ ಬದುಕಿನ ಹೋರಾಟಗಳು ಮತ್ತು ಸಮಾಜದಲ್ಲಿ ಶೋಷಿತ ವರ್ಗದವರ ಬದುಕಿನ ವಾಸ್ತವ ಚಿತ್ರಣ ಮತ್ತು ಪುರೋಹಿತ ಶಾಹಿಗಳ ಶೋಷಿತ ಮತ್ತು ಬಡವರನ್ನು

೨೯. ಜಾನಪದ ಜಯಂತಿ – ಸಂ. ಶ್ರೀ ನಿಂಗಣ್ಣ ಸಣ್ಣಕ್ಕಿ ಪುಟ–೮೬ ವರ್ಷ ೧೯೮೭.
೩೦. ಜಾನಪದ ಸಾಹಿತ್ಯ ದರ್ಶನ –೩– ಸಂ. ಎಂ.ಎಸ್. ಸುಂಕಾಪುರ ಪುಟ–೫೩.

ವ್ಯವಸ್ಥಿತವಾಗಿ ಸಮಾಜದ ಎಲ್ಲಾ ಸವಲತ್ತು ಸೌಲಭ್ಯಗಳಿಂದ ದೂರವಿಟ್ಟು, ಅವರನ್ನು ಆಳುವಂತೆ ನಡೆಸಿಕೊಳ್ಳುವ ಮನೋಭಾವನೆ ಹೊಂದಿದ ಪುರೋಹಿತ ವರ್ಗದ ಗುಣಗಳು ಈ ನಾಟಕದಲ್ಲಿ ಬಯಲಿಗೆ ಬಂದಿವೆ.

ಪುರಾಣ ಪುಣ್ಯ ಕಥೆ ಕಾವ್ಯಗಳಲ್ಲಿ ಯಾವ ವ್ಯಕ್ತಿಗಳು ಪೂಜ್ಯ ಎನಿಸಿಕೊಂಡಿದ್ದಾರೆ, ಅವರು ಮಾಡಿದ ಕಾರ್ಯಗಳು ಜನರ ಮುಂದೆ ಇಟ್ಟಿದೆ. ಜನರು ಅವರನ್ನು ಪೂಜ್ಯರೆಂದು ಕರೆದಿದ್ದಾರೆ. ಅವರ ಹೇಳಿದ ಮಾರ್ಗದಲ್ಲಿಯೇ ನಡೆದಿದ್ದಾರೆ. ಅವರು ಹೇಳಿದ ಪ್ರತಿ ವಾಕ್ಯಗಳು ವೇದವೆಂದು ತಿಳಿದು, ಪಾಲಿಸಿದ್ದಾರೆ. ಅದನ್ನು ಪಾಲಿಸುವಂಥ ವ್ಯವಸ್ಥೆ ಮತ್ತು ಭಯದ ವಾತಾವರಣವನ್ನು ಪುರೋಹಿತ ವರ್ಗದವರು ನಿರ್ಮಿಸಿದರು. 'ರಾಜರ ಪ್ರತಿಬಿಂಬಗಳಾದ ದೇವರುಗಳು, ರಾಣಿಯರ ಸಂಕೇತವಾದ ದೇವತೆಗಳು ಒಟ್ಟಾಗಿ ಶೋಷಕರ ಶ್ರೇಯಸ್ಸನ್ನು ಕಾಪಾಡಲು ಸೃಷ್ಟಿಯಾದವರು. ರಾಜ್ಯರು, ದೇವರು ಒಂದೇ ತಾಯಿಯ ಮಕ್ಕಳು. ಮನುಷ್ಯನಿಂದಲೇ ಹುಟ್ಟಿದ ಈ ದೇವರುಗಳನ್ನು ಶೋಷಿತ ವರ್ಗಗಳ ಬಾಗಿಲ ಬಳಿ ಕಾವಲಿಟ್ಟರು[೩೧].

ಶತಮಾನಗಳಿಂದ ಶೋಷಿಸಲ್ಪಡುವ ವರ್ಗದವರ ಜೀವನ ಮತ್ತು ಬದುಕನ್ನು ಈ ದೊಡ್ಡಾಟದಲ್ಲಿ ಮೂಡಿ ಬಂದಿದೆ. ದೊಡ್ಡಾಟದಲ್ಲಿ ಭಾರತೀಯ ತತ್ವಶಾಸ್ತ್ರ ಇತಿಹಾಸಗಳಿಗೆ ಚಾರ್ವಕ ಭೌತಿಕ ವಾದಕ ಬಹಳ ಮಹತ್ವ ಇದೆ. ಚಾರ್ವಕ ಸಿದ್ಧಾಂತವು ಋಗ್ವೇದದಲ್ಲಿ ಕಂಡು ಬರುತ್ತದೆ. ಆದರೂ ಕ್ರಿ.ಶ. ೬ ನೇ ಶತಮಾನದ ವೇಳೆಗೆ ಈ ಸಿದ್ಧಾಂತ ಭಾರತದಲ್ಲಿ ಪ್ರ ಪ್ರಥಮ ಸಾಮಾಜಿಕ, ಸಾಂಸ್ಕೃತಿಕ ಕ್ರಾಂತಿಗೆ ನಾಂದಿ ಹಾಡಿದೆ. ಇಲ್ಲಿಯ ವರೆಗೆ ಭಾರತೀಯರಿಗೆ ವೇದ ಉಪನಿಷತ್ತು, ಮಂತ್ರ ತಂತ್ರಗಳು ಪರಿಚಯವಿದ್ದವು. ಚಾರ್ವಕ ಸಿದ್ಧಾಂತವೆಂದರೆ ಅದು ಮೊಟ್ಟಮೊದಲಿಗೆ ಮಾನವನ ಸಮಾನತೆ ಸಂದೇಶವನ್ನು ಎಲ್ಲಾ ವರ್ಗದವರಿಗೂ ಮುಟ್ಟಿಸಿದ ಸಿದ್ಧಾಂತವಾಗಿದೆ.

ಇದು ಬಡವರಿಗೆ, ಶೂದ್ರರರಿಗೆ, ಗುಲಾಮರಿಗೆ, ಶೋಷಣೆಗೆ ಬಲಿಯಾದವರಿಗೆ, ಬದುಕು ಕೊಟ್ಟ ಸಿದ್ಧಾಂತವಾಗಿದೆ. "ಬಂಡಾಯ ಸಾಹಿತ್ಯದ ಮೇಲೆ ಇರುವ ಶೋಷಣೆಯ ಆರೋಪ ಈ ದೊಡ್ಡಾಟದಲ್ಲಿ ಮೂಡಿ ಬಂದಿದೆ ಈ ನಾಟಕ ಪೂರ್ವ ನಿರ್ಧಾರ ಘೋಷಿತ ಚೌಕಟ್ಟಿನಲ್ಲಿದೆ. ಲೇಖಕರಿಗೆ ರಂಗ ಕಲ್ಪನೆಯ ಬಗ್ಗೆ ಸಂಪೂರ್ಣ ಅರಿವಿದೆ. ಅರಿವಿನಿಂದ ಬರೆದ ಸಾಹಿತ್ಯ ನಾಟಕ ಇದಾಗಿದೆ. 'ಈ ನಾಟಕದಲ್ಲಿ ಲೇಖಕರಿಗೆ ಪುರೋಹಿತಶಾಹಿ ವ್ಯವಸ್ಥೆಯನ್ನು ವಿರೋಧಿಸುವುದೇ ಮೂಲ ಕಾಳಜಿಯಾಗಿ ಬಿಡುತ್ತವೆ. ಹಾಗಾಗಿಯೇ ನಾಟಕದ ಎಲ್ಲಾ ಪಾತ್ರಗಳು ಸಲಿಸಾಗಿ ಬ್ರಾಹ್ಮಿಣ ಸಂಸ್ಕೃತಿ ದೇವರ ಕಲ್ಪನೆಯ ಕುರಿತಾಗಿ ಟೀಕಾಸ್ತ್ರಗಳನ್ನು ಪ್ರಯೋಗಿಸುತ್ತಲೇ ಇರುತ್ತದೆ[೩೨].

---

೩೧. ನರಬಲಿ ಡಾ. ಬಸವರಾಜ ಸಬರದ ಪುಟ-೧೧.
೩೨. 'ಕರ್ನಾಟಕ ಮಲ್ಲ' ದಿನಪತ್ರಿಕೆ ಮುಂಬಯಿ ದಿನಾಂಕಃ ೧೫-೭-೧೯೯೩.

ನರಬಲಿ ನಾಟಕದ ಪ್ರಾರಂಭದ ದೃಶ್ಯದಲ್ಲಿ ಪುರೋಹಿತ ವರ್ಗದವರನ್ನು ಹಿಯಾಳಿಸುವ ವಿಷಯಗಳು ಓದುಗರಿಗೆ, ನೋಡುಗರಿಗೆ ಪರಿಣಾತ್ಮಕವಾಗಿ ಕಂಡು ಬರುತ್ತದೆ. ಶೋಷಿತ ವರ್ಗದವರಿಗೆ ಇದು ಹಿತವಾಗಿ ಕಂಡರೆ ಆಸ್ತಿಕ ಓದುಗರಿಗೆ ಸ್ವಲ್ಪ ಮನ ನೋಯಿಸುವಂತೆ ಕಂಡು ಬಂದಿವೆ. ಇಲ್ಲಿನ ವಿಚಾರಗಳು ಇಂತಿವೆ. ಉದಾಹರಣೆಗೆಃ 'ದೇವ ವೈಶ್ಯರನ್ನು ಗರ್ಭಿಣಿಯಾಗುವಂತೆ ಮಾಡುವ, ಮಹರ್ಷಿಗಳ[(೩೩)] ಕೆಲಸವನ್ನು ಈ ನಾಟಕದಲ್ಲಿ ಖಂಡ ತುಂಡಾಗಿ ಖಂಡಿಸಲಾಗಿದೆ. ಮತ್ತು ಈ ನಾಟಕದಲ್ಲಿ ಕುಲದ ಬಗ್ಗೆ ಆಸ್ತಿಕರು ಮಾತಾಡುವಂತದ್ದು, ಅದರ ಆಧಾರ ಸಹಿತವಾದ ಉತ್ತರವನ್ನು ನೀಡಲಾಗಿದೆ.

ವ್ಯಾಸ, ದ್ರೋಣಾಚಾರ್ಯರ, ನಾರದ, ಮಹರ್ಷಿಯ, ಶೌನಕ ಮಹರ್ಷಿ, ಶುಕಮಹರ್ಷಿ, ಋಷಿಶೃಂಗ, ಅಶ್ವತ್ಥಾಮ, ರಾಮ, ಧರ್ಮರಾಜ, ಅರ್ಜುನ, ಭೀಮ, ನಕಲು ಸಹದೇವರ ಇವರ ಕುಲದ ಬಗ್ಗೆ ಅವರ ಹುಟ್ಟಿದ ವೃತ್ತಾಂತಗಳು ಬಿಚ್ಚಿಡುವುದಾಗಿದೆ. ಇಷ್ಟೆಲ್ಲಾ ತಿಳಿದ ಓದುಗರು, ನೋಡುಗರು ಕುಲದ ಮಾತೆತ್ತಲಾರದಂತೆ ಈ ನಾಟಕದಲ್ಲಿ ಚಿತ್ರಣ ಮೂಡಿಬಂದಿದೆ. ಶ್ರೇಷ್ಠ ಕುಲದವರೂ ಎಂದು ಜಂಬ ಕೊಚ್ಚಿಕೊಳ್ಳುವ ಜನರಿಗೆ ಈ ನಾಟಕದಲ್ಲಿ ಒಳ್ಳೆಯ ರೀತಿಯ ಉತ್ತರ ದೊರಕಿದೆ ಎಂದು ಹೇಳಬಹುದು. ನರಬಲಿಯಲ್ಲಿ ವೇನ ಮಹಾರಾಜನ ಮುಖಾಂತರ ತನ್ನ ಬಂಡಾಯದ ಬಾವುಟವನ್ನು ಹಾರಿಸುವಂತದ್ದು, ಚರ್ಚಾತ್ಮಕವಾಗಿ ಮೂಡಿಬಂದಿದೆ.

ಸಭೆಯಲ್ಲಿ ಹೊಗಳಭಟ್ಟರ ಪ್ರವೃತ್ತಿಯನ್ನು ರಾಜನು ಸಹಿಸುವುದಿಲ್ಲ. ರಾಜನು ತನ್ನ ಆಡಳಿತದಲ್ಲಿ ಸಮಾನತೆಯ ಕಹಳೆಯನ್ನು ಉದುವನು. ಇದಕ್ಕೆ ಆಡಳಿತದಲ್ಲಿ ಇರುವ ಪುರೋಹಿತ ವ್ಯವಸ್ಥೆಯನ್ನು ಜೀವಂತವಾಗಿರಿಸಲು ಒಂದು ವರ್ಗ ಪ್ರಯತ್ನ ಮಾಡುವಂತದ್ದು, ಅದಕ್ಕೆ ರಾಜನೇ ವಿರೋಧ ವ್ಯಕ್ತಪಡಿಸುತ್ತಾರೆ. ಆದರೂ ಪುರೋಹಿತ ವ್ಯವಸ್ಥೆ ರಾಜನಿಗೆ ಈ ನೀತಿಯಿಂದ ನಿಮ್ಮ ಪ್ರಾಣಕ್ಕೆ ಅಪಾಯವಿದೆ ಎಂದು ಎಚ್ಚರಿಕೆ ನೀಡುತ್ತವೆ. ಆದರೂ ರಾಜರು ಅದಕ್ಕೆ ಹೆದರದೇ ಪುರೋಹಿತ ವ್ಯವಸ್ಥೆಗೆ ಪ್ರೋತ್ಸಾಹ ನೀಡುವವರಿಗೆ ತನ್ನ ಆಡಳಿತದಲ್ಲಿ ಸ್ಥಾನ ನೀಡದೇ ಅವರನ್ನು ಬಹಿಷ್ಕಾರ ಹಾಕುತ್ತಾನೆ. ಬಂಡಾಯ ಮನೋಭಾವನೆಯ ವ್ಯಕ್ತಿ ಸುಳ್ಳು ಹೊಗಳಿಕೆ ಸಹಿಸುವುದಿಲ್ಲ. ಏನೇ ಇದ್ದರೂ ಅವನು ನಿಜ ಜೀವನದ ಪರಿಸ್ಥಿತಿಯ ಕುರಿತು ವಿಚಾರ ಮಾಡುತ್ತಾನೆ.

ಆ ಒಂದು ಭಾವನೆಯಲ್ಲಿ ಅವನ ವಿಚಾರ ಧಾರೆಗಳು ಮುಂದುವರೆಯುತ್ತವೆ. ಆದರೆ ಧರ್ಮದ ಹೆಸರಿನಲ್ಲಿ ಪುರೋಹಿತ ವರ್ಗವು ಮುಗ್ಧ ಮತ್ತು ಸಮಾಜದ ಕೆಳವರ್ಗದ ಶೂದ್ರರರಿಗೆ,

---

೩೩. ನರಬಲಿ ಡಾ. ಬಸವರಾಜ ಸಬರದ ಪುಟ-೦೮.

ಗುಲಾಮರಿಗೆ, ದಾಸರಿಗೆ ಮುಕ್ತವಾದ ಜೀವನ ನಡೆಸಲು ಬಿಡದೇ ಇರುವುದು, ವ್ಯವಸ್ಥೆಯ ವಿರುದ್ಧವಾದ ವಿಚಾರಗಳನ್ನು ಈ ನಾಟಕದಲ್ಲಿ ಮೂಡಿಬಂದಿದೆ. ಇಂತಹ ವ್ಯವಸ್ಥೆಗೆ ಸಮಾಜವು ಹೇಗೆ ಸ್ಪಂದಿಸಬೇಕು ಎಂಬ ವಿಚಾರ ಧಾರೆಗಳು ಈ ನಾಟಕದಲ್ಲಿ ಕಂಡು ಬಂದಿದೆ. ಧರ್ಮದ ವಿರೋಧವಾಗಿ ನಡೆದರೆ ಬದುಕುವುದು ಕಷ್ಟಕರ ಎಂಬ ಮಾತು ತಿಳಿಯುತ್ತದೆ.

ನಾಟಕದಲ್ಲಿ ಸನಾತನ ಧರ್ಮದ ವಿಚಾರಗಳು ಆರ್ಯ ಋಷಿಗಳ ವ್ಯವಸ್ಥೆಯನ್ನು ಕಂಡು ಬರುತ್ತದೆ. ಋಷಿಯಾದವನ ಮನೋಭಾವನೆ ಸ್ತ್ರೀಯರನ್ನು ನೋಡುವಂತಹ ದೃಷ್ಟಿಕೋನ, ಹೆಣ್ಣುಮಕ್ಕಳು ಧರ್ಮ ಶಾಸ್ತ್ರಗಳನ್ನು ಓದಲು ತಿಳಿಯಲು ಅರ್ಹರಲ್ಲ ಎಂಬ ಭಾವನೆ ಮೂಡಿಸುತ್ತದೆ. ಮತ್ತು ಹೆಣ್ಣು ಪುರುಷರ ಗುಲಾಮಳಂತೆ ಅವಳಿಗೆ ಮೋಕ್ಷವೇ ಇಲ್ಲ ಎಂಬಂತೆ ಸನಾತನ ಧರ್ಮವು ಬೋಧಿಸುತ್ತದೆ. ಇಂತಹ ವ್ಯವಸ್ಥೆಯನ್ನು ಸಹಿಸಿಕೊಳ್ಳುವರು ಸಮಾಜದಲ್ಲಿ ಇದ್ದರೆ ಅದಕ್ಕೆ ಇಂತಹ ಧರ್ಮ ತತ್ವಗಳು ಇಂದಿಗೂ ಜಾರಿಯಲ್ಲಿವೆ. ಸನಾತನ ಧರ್ಮವು ಪ್ರಕೃತಿಯಲ್ಲಿ ನಡೆಯುವ ಚಟುವಟಿಕೆಗಳಿಗೆ ನಾವೇ ಕಾರಣವೆಂಬಂತೆ ಪ್ರತಿಬಿಂಬಿಸುತ್ತವೆ.



ಯಜ್ಞೆಯಾಗ ಹೋಮ ಮಾಡಿದರೆ ಮಾತ್ರ ಮಳೆ, ಬೆಳೆ ಜನರು ಆರೋಗ್ಯವಾಗಿರುತ್ತಾರೆ ಎಂಬಂತೆ ಚಿತ್ರಿಸುತ್ತವೆ. ಆದರೆ ಇದಕ್ಕೆ ಬಂಡಾಯ ಮನೋಭಾವದ ವ್ಯಕ್ತಿಗಳು ವಿರೋಧಿಸುವಂತದ್ದು, ಈ ನಾಟಕ ಸಮಾಜಕ್ಕೆ ಸಾದರಪಡಿಸುತ್ತದೆ. ದೇವರು ಇದ್ದಾನೆ ಅವನು ಇಡೀ ಬ್ರಹ್ಮಾಂಡವನ್ನು ನಡೆಸುತ್ತಿದ್ದಾನೆ, ನಿಯಂತ್ರಿಸುತ್ತಿದ್ದಾನೆ ಎಂದು ಸನಾತನ ಧರ್ಮ ಹೇಳಿದರೆ ಬಂಡಾಯದ ಮನೋಭಾವನೆ ಇವೆಲ್ಲ ತಿರಸ್ಕರಿಸಿ ದೇವರು, ದೈವ ಇವೆಲ್ಲ ಮನುಷ್ಯನ ಅಜ್ಞಾನದಿಂದ ಸೃಷ್ಟಿಸಲಾಗಿದೆ.



ಆದಿಮಾನವ ತನ್ನ ಕಲ್ಪನೆಯಂತೆ ದೇವರ ರೂಪ, ವೇಷ, ಭೂಷಣಗಳನ್ನು ನೀಡಿದ್ದಾನೆ. ಪ್ರಕೃತಿಯಲ್ಲಿನ ಶಕ್ತಿಗಳನ್ನು ಅರ್ಥ ಮಾಡಿಕೊಳ್ಳಲಾಗದೇ ನಿಜವಾದ ಸತ್ಯವನ್ನು ಬಯಲಿಗೆ ತರದೇ ಅದನ್ನು ಮರೆ ಮಾಡಿ, ಮುಗ್ದರನ್ನು ಸುಲಿಯುವಂತಹ ಕೆಲಸ ಇದಾಗಿದೆ ಎಂಬ ಅಭಿಪ್ರಾಯ ಬಂಡಾಯ ಸಮುದಾಯದವಾಗಿದೆ. ಸ್ವರ್ಗ ನರ್ಕಗಳ ಪರಿಕಲ್ಪನೆಯನ್ನು ಹೊಂದದೇ ನಿಜವಾದ ಸ್ವರ್ಗ ಎಂದರೆ ದಿನದಲಿತರನ್ನು, ಶೂದ್ರರರನ್ನು, ಬಡವರನ್ನು, ಗುಲಾಮರನ್ನು, ಶೋಷಿತರನ್ನು ಬದುಕು ನೀಡುವುದೇ ನಿಜವಾದ ಧರ್ಮ. ಅದೇ ಸ್ವರ್ಗ ಎಂಬುವುದು ಮನೋಭಾವನೆ ಈ ನಾಟಕಗಳ ಮುಖಾಂತರ ತಿಳಿಯುತ್ತದೆ.

ಬಡವರ ದುಡಿಮೆ ಅವರು ದುಡಿದರೆ ಅವರ ಹೊಟ್ಟೆ ತುಂಬುತ್ತದೆ, ಅವರಿಗೆ ಬಟ್ಟೆ ದೊರೆಯುತ್ತದೆ ಎಂಬುವುದು ತಿಳಿಯುತ್ತದೆ. ಮಂತ್ರ ತಂತ್ರ, ಜಪ ತಪಗಳಿಂದ ಹೊಟ್ಟೆ ತುಂಬುವುದಿಲ್ಲ ಎಂಬ ವಿಚಾರ ಈ ನಾಟಕದಿಂದ ತಿಳಿದು ಬರುತ್ತದೆ. 'ನಾಸ್ತಿಕನಾದ ಪುರಾಣೋಕ್ತ ವೇನ ಮಹಾರಾಜ ಆಸ್ತಿಕನಾದ ಆರ್ಯ ಋಷಿ ಗೌತಮನ ಮೂಲಕ ಕೊಲೆಯಾದ ವಸ್ತುವನ್ನು ಈ ನಾಟಕ ಒಳಗೊಂಡಿದೆ. ಇದರಲ್ಲಿ ಪುರೋಹಿತಶಾಹಿ ತನಗೆ ಒಗ್ಗದವರನ್ನು ನಾಶ ಮಾಡುವ ಪ್ರತಿಭಟನೆ ಪ್ರಮುಖ ಅಂಶವಾಗಿದೆ. ರಾಜನಾದರೂ ವೇನ ವೈದಿಕನ ಕಣ್ಣಿಗೆ ರಾಕ್ಷಸನಾಗಿದ್ದಾನೆ. ಮಗನಾದ ಪೃಥ್ವಿಕುಮಾರ ನಿಂದಲೇ ತಂದೆ ವೇನ ರಾಜನನ್ನು ಕೊಲ್ಲಿಸುವಲ್ಲಿ ಗೌತಮ ಯಶಸ್ವಿಯಾಗುತ್ತಾನೆ. ತಂದೆಯನ್ನು ಕೊಂದಂತೆ ತಾಯಿಯನ್ನು ಕೊಲ್ಲಲು ಪ್ರೇರಣೆ ಬಂದಾಗ ಪ್ರಥು ಎಚ್ಚತ್ತು ಗೌತಮನನ್ನು ಬಲೆ ತೆಗೆದುಕೊಳ್ಳಲು ಆವೇಷದಿಂದ ಅಟ್ಟಿಸಿಕೊಂಡು ಹೋಗುತ್ತಾನೆ. ರಾಜಮಾತೆ ಸುಮಿತೆಯ ಕಣ್ಣೀರಿನೊಡನೆ ಹೊಸ ಸಮಾಜದ ಆಶಯದೊಡನೆ ನಾಟಕ ಮುಗಿದಿದೆ[೩೪].

ಬಂಡಾಯ ಮನೋಭಾವನೆ ವ್ಯಕ್ತಿಗಳಿಗೆ ದೇವರ ಕಲ್ಪನೆಯನ್ನು ನಾಟಕ ಉತ್ತಮವಾಗಿ ನೀಡಿದೆ. 'ರಕ್ತ ಮೌಂಸಗಳಿಂದ ಕೂಡಿದ ನಿತ್ಯವು ಕಣ್ಣಿಗೆ ಕಾಣುವ ಮಾನವನೇ ನನ್ನ ದೇವರು, ಹುಲ್ಲಿನ ಗುಡಿಸಲಿನಲ್ಲಿ ನರ್ಕ ಅನುಭವಿಸುತ್ತಿರುವ ದಟ್ಟ ದರಿದ್ರರೆ ನನ್ನ ದೇವರು[೩೫] ಎಂಬ ವಿಚಾರದಲ್ಲಿ ಕೆಳವರ್ಗದ ಎಂಬ ವಿಚಾರದಲ್ಲಿ ಕೆಳ ವರ್ಗದ ಜನರ ಬಗ್ಗೆ ಇರುವ ಕಳಕಳಿಯನ್ನು ಕಂಡು ಬರುತ್ತದೆ. ಕರ್ಮ ಸಿದ್ಧಾಂತದ ಕುರಿತು ನಾಟಕದಲ್ಲಿ ಒಳ್ಳೆಯ ವಿಚಾರಗಳು ಮೂಡಿಬಂದಿವೆ. ಶತಮಾನಗಳಿಂದ ದರಿದ್ರರ ಪ್ರಗತಿ ಮಾರ್ಗದಲ್ಲಿ ಗುಂಡು ಕಲ್ಲುಗಳನ್ನು ನಿಲ್ಲಿಸಿದ್ದೀರಿ.

ಈ ಕರ್ಮಸಿದ್ಧಾಂತ ಹೆಸರಿನಲ್ಲಿ ಸ್ವರ್ಗ ನರ್ಕ ಸೃಷ್ಟಿಸಿ ಲಕ್ಷೋಪ ಲಕ್ಷ ದಟ್ಟದರಿದ್ರರ ಕೊಂಪೆಗಳಿಗೆ ಬೆಂಕಿ ಇಟ್ಟೀರಿ. ಸಿದ್ಧಾಂತ ಹೆಸರಿನಲ್ಲಿ ಮಾನವರಲ್ಲಿ ನಿರ್ವೀರ್ಯವಾದ ನಿಸ್ತೇಜವಾದ, ನಿಷ್ಕ್ರೀಯ ಪರ್ವತಗಳನ್ನು ಸೃಷ್ಟಿ ಮಾಡಿದ್ದೀರಿ. ಕರ್ಮ ಸಿದ್ಧಾಂತ ನೀವು ಬೋಧಿಸಿರುವ ಅಂಧವಾದ ಸತ್ಯ. ಕುಲ ಧರ್ಮಗಳು ನೀವು ಕಲ್ಪಿಸಿದ ಕಲ್ಪನೆ. ಅದು ದೈವ ನಿರ್ಮಿತವಲ್ಲ. ವೇದ ಬೋಧಿಸುದದಲ್ಲ. ಬ್ರಾಹ್ಮಿಣ, ಕ್ಷತ್ರೀಯ, ವೈಶ್ಯ, ಶೂದ್ರ ಇವರು ಬ್ರಹ್ಮನಿಂದ ಹುಟ್ಟಿದರೆ ಬ್ರಹ್ಮ ಯಾರಿಂದ ಹುಟ್ಟಿದ ಎಂಬ ಬಂಡಾಯದ ವಿಚಾರವನ್ನು ಇಲ್ಲಿ ಮೂಡುತ್ತದೆ.

---

೩೪. ಕನ್ನಡ ನುಡಿ – ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಪುಸ್ತಕ ವಿಮರ್ಶೆ.
೩೫. ನರಬಲಿ ಡಾ. ಬಸವರಾಜ ಸಬರದರು–ಸಂಪಾದಕರು ಪುಟ–೨೯.

'ಧರ್ಮ ರಕ್ಷಣೆಯ ಹೆಸರಿನಲ್ಲಿ ಪಾಮರರನ್ನು ಪಶುಗಳನ್ನಾಗಿ ಮಾಡಿದ್ದೀರಿ. ವೇದ ಕೇಳಿದ ಶೂದ್ರರರ ಕಿವಿಯಲ್ಲಿ ಸೀಸ ಕರಗಿಸಿ ಸುರಿದಿರಿ. ಗುಲಾಮರನ್ನು ಉದ್ದಕ್ಕೂ ಕೊಯ್ಯುವ ಪಾಲಕ ವರ್ಗದ ಪಾದಗಳನ್ನು ನೆಕ್ಕುವ ನೀವು ಊರ ಹೊರಗೆ ಹೊಲಗೇರಿಗಳನ್ನು ಸೃಷ್ಟಿಸಿದ್ದೀರಿ. ಆಶ್ರಮಗಳಲ್ಲಿ ಅಖಂಡೈಶ್ವರ್ಯ ಸಂಪತ್ತಿನಿಂದ ಮೆರೆಯುವ ನೀವು ಅಂತಪುರದ ಮಹಿಳೆಯರೊಂದಿಗೆ ಗುಬ್ಬಚ್ಚಿ ಮೈಥಲಗಳನ್ನು ನಡೆಸಿದ್ದೀರಿ. ಭೀಕರ ದಾರಿದ್ರ್ಯಕ್ಕೆ ಬಲಿಯಾಗಿರುವ ಅಸಂಖ್ಯಾತ ಪ್ರಜೆಗಳ ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು ಕಿತ್ತು ಸೇಡು ತೀರಿಸಿಕೊಳ್ಳುವ ಕಾಲ ಒಂದು ಬರುತ್ತದೆ. ಆ ದಿನ ನಿನ್ನ ಧರ್ಮ ದಿಕ್ಕಿಲ್ಲದ ನಾಯಿಯಂತೆ ಸಾಯುತ್ತದೆ'[(೩೬)].

ಎಂಬ ಮಾತಿನಲ್ಲಿ ಬಂಡಾಯದ ವಿಚಾರಗಳು ಎಷ್ಟು ಕ್ರಾಂತಿಕಾರಕವಾದ ಬದಲಾವಣೆಗಳನ್ನು ಬಯಸುತ್ತಿವೆ. ಮತ್ತು ಅದಕ್ಕೆ ಅನುಗುಣವಾಗಿ ಕಾರ್ಯ ಮಾಡುತ್ತಿದೆ ಎಂಬುವುದು ಈ ನಾಟಕದ ಅಂತರಾತ್ಮದ ಭಾವನೆಯಾಗಿದೆ. 'ಜಾನಪದ ಶೈಲಿಯ ಈ ನಾಟಕವು ಪುರೋಹಿತ ಶಾಹಿಯ ವಿರುದ್ಧ ವಸ್ತು ನಿಷ್ಠ ವಿಮರ್ಶವಾಗಿದೆ. ಚಾರ್ವಕ ಪಂಥವನ್ನು ಎತ್ತಿ ಹಿಡಿದ ವೇನ ಮಹಾರಾಜ ಇಲ್ಲಿಯ ಕೇಂದ್ರ ಪಾತ್ರ. ಗೌತಮನ ಪಿತ್ರೂರಿಯಿಂದ ಸ್ವಂತ ಮಗನಾದ ಪೃಥ್ವಿಕುಮಾರನಿಂದಲೇ ವೇನ ಮಹಾರಾಜ ಕೊಲೆಗಿಡಾಗಿರುವುದು ಕಥಾವಸ್ತು. ಅಗತ್ಯವಾದಷ್ಟು ನಾಟಕೀಯ ಘಟನೆಗಳಿಲ್ಲದೇ ಸೊರಗಿರುವ ಈ ಕಥೆಗೆ ಸಂಭಾಷಣೆ ಜೀವಾವಳ'[(೩೭)].

ಬಂಡಾಯ ಮನೋಭಾವನೆಯನ್ನು ಈ ನಾಟಕದಲ್ಲಿ ದಟ್ಟವಾಗಿ ಸ್ಪಷ್ಟವಾಗಿ ಮೂಡಿ ಬಂದಿದೆ. ಪುರೋಹಿತ ಶಾಹಿ ವ್ಯವಸ್ಥೆ ಎಷ್ಟು ಗಟ್ಟಿಯಾಗಿದ್ದರೂ ಅದಕ್ಕೆ ಬಂಡಾಯ ಮನೋಭಾವನೆ ಕುಗ್ಗುವಂತೆ ಪ್ರಶ್ನೆ ಉದ್ಭವಿಸುವುದಿಲ್ಲ ಎಂಬ ವಿಚಾರ ಮೂಡಿ ಬಂದಿದೆ. 'ಪರ್ವತಗಳು ಕುಸಿದು ಬಿದ್ದರೂ ನಕ್ಷತ್ರಗಳು ಕಳಚಿ ಬಿದ್ದರೂ ಹದಿನಾಲ್ಕು ಲೋಕಗಳೇ ನನ್ನ ಮೇಲೆ ಎರೆಬಿದ್ದರೂ ನಾನು ರಕ್ತ ಮೌಂಸದ ಮಾನವನನ್ನೇ ಪ್ರೀತಿಸುತ್ತೇವೆ, ಕೀವುಡ ಕುರುಡ, ಮುಕನಾದ ಆ ದೇವರುಗಳನ್ನು ಮಾತ್ರ ನಂಬಲಾರೆ. ದೇವರನ್ನು ಬೇಡ ಎನ್ನುವ ನಾನು ಮಾನವನನ್ನು ಪೂಜಿಸುತ್ತೇವೆ. ಎಂಬುವುದು ಸ್ಪಷ್ಟವಾಗಿದೆ'[(೩೮)].

ಈ ನಾಟಕದ ನರಬಲಿಯ ಕೇಂದ್ರದಲ್ಲಿರುವುದು ಜೀವ ವಿರೋಧಿ ಸಂಪ್ರದಾಯಿಕ. ಮೌಲ್ಯಗಳು ಮತ್ತು ಜೀವನ ಪರವಾದ ಬಂಡಾಯದ ಮೌಲ್ಯಗಳು, ಸಂಘರ್ಷ ನಾಟಕದ ಪ್ರಾರಂಭದಲ್ಲೇ ಧೋತಿ ಪಾತ್ರ ಹೇಳುವ ಹಾಗೆ ನಾಸ್ತಿಕನಾದ ವೇನ ರಾಜ ಒಂದು ಕಡೆ

---

೩೬. ನರಬಲಿ ಡಾ. ಬಸವರಾಜ ಸಬರದ ಪುಟ–೩೫.

೩೭. ಸಾಹಿತ್ಯ ಸಂಘರ್ಷ ಪುಸ್ತಕ ಸಮೀಕ್ಷೆ ಪುಟ–೫೮ – ೧೯೯೩ ಸೆಪ್ಟೆಂಬರ್.

೩೮. ಎಂ.ಕೆ. ಆನೀಲ ಕನ್ನಡ ವಾರ್ಷಿಕ ಪುಟ–೨೩೦, ೧೯೯೨ ಕನ್ನಡ ವಿಶ್ವವಿದ್ಯಾಲಯ ಹಂಪಿ.

ಆರ್ಯಋಷಿ ಗೌತಮ ಮತ್ತೊಂದು ಕಡೆ ಒಂದು ಪೂರ್ವವಾದರೆ ಮತ್ತೊಂದು ಪಶ್ಚಿಮ ಈ ಪೂರ್ವ ಪಶ್ಚಿಮಗಳ ಸಂಘರ್ಷ ಕೊನೆಗೊಳ್ಳುವುದು ವೇನ ಮಹಾರಾಜನ ಸಾವಿನಲ್ಲಿ ಈ ಹಿನ್ನೆಲೆಯಲ್ಲಿ ನೋಡಿದಾಗ ನರಬಲಿ ಕೊನೆಗೆ ಸಹಜವಾಗಿ ತಾಯಿಯ ರೂಪದಲ್ಲಿ ಕೊನೆಗೊಳ್ಳುತ್ತದೆ.

ಒಟ್ಟಿನಲ್ಲಿ ದೊಡ್ಡಾಟ ನಾಟಕದಲ್ಲಿ ಲೇಖಕರು ಸಮಾಜದ ಕೆಳ ವರ್ಗದ, ಶೋಷಿತರ, ಬಡವರ, ದೀನ ದಲಿತರ ಸ್ತ್ರೀಯರನ್ನು ಕುರಿತು ವರ್ಗವರ್ಣ ರಹಿತವಾದ ಸಮಾಜ ನಿರ್ಮಾಣದಲ್ಲಿ ಸಮಾಜದ ಎಲ್ಲಾ ವರ್ಗದವರು ಕೈಜೋಡಿಸುವ ಅನಿವಾರ್ಯತೆಯನ್ನು ಎತ್ತಿ ತೋರಿಸುವಂತದ್ದು, ಈ ನಾಟಕದ ಜೀವಾಳವಾಗಿದೆ.

**ನರಬಲಿ ನಾಟಕದ ಪಾತ್ರಗಳುಃ**

ಡಾ. ಬಸವರಾಜ ಸಬರದರ ಈ ನಾಟಕದಲ್ಲಿ ಪ್ರಮುಖ ಪಾತ್ರಗಳಾಗಿ ಸಾರಥಿ, ದೂತಿ, ವೇನ, ಗೌತಮ, ವಿಶ್ವನಾಥ ಭಟ, ಪೃಥ್ವಿಕುಮಾರ, ಸುನಿಥೆ, ದ್ವಾರ ಪಾಲಕ, ಹೊಗಳ ಭಟ್ಟರು, ಹಿಮ್ಮೇಳ ಹೀಗೆ ಅನೇಕ ಪಾತ್ರಗಳು ಬರುತ್ತವೆ. ಇಲ್ಲಿನ ಪಾತ್ರಗಳಾದ ಸಾರಥಿ ಮತ್ತು ದೂತಿಗಳು ಈ ನಾಟಕದ ಉಳಿದ ಪಾತ್ರಗಳ ಪರಿಚಯವನ್ನು ಸುಂದರವಾಗಿ ಮಾಡಿಕೊಡುತ್ತವೆ. ಪರಿಚಯಮಾಡುವಂತ ರೀತಿ ಬಹಳಷ್ಟು ಆಕರ್ಷಣೀಯವಾಗಿದೆ. ಉದಾಹರಣೆಗೆಃ ದೂತಿ 'ಅಹೇ ಸಾರಥಿ, ನಾನರೆಂಬುದನ್ನು ಹೇಳುತ್ತೇನೆ ಕೇಳುವಂತನಾಗು' ಎಂದಾಗ 'ಸಾರಥಿ ಅದೇನಿರುವುದು ಹೇಳುವಂತಳಾಗು' ಎಂಬ ಉತ್ತರ ನಾಟಕವನ್ನು ಓದುಗರಿಗೆ ಆಕರ್ಷಣೀಯವಾಗಿದೆ.

ಇಲ್ಲಿನ ಪಾತ್ರಗಳು ಪುರಾಣ ಕಥೆಗಳು ಋಷಿ ಮುನಿಯರ ರಾಜರ ಪರಿಚಯಗಳು ಚೆನ್ನಾಗಿ ಮಾಡಿಕೊಡುತ್ತವೆ. ಈ ನಾಟಕದ ವೇನ ಮಹಾರಾಜನ ಪಾತ್ರವು ಬಂಡಾಯ ಮನೋಭಾವನೆ ಹೊಂದಿದ ವ್ಯಕ್ತಿಯಾಗಿ, ಅವನ ಪಾತ್ರದಿಂದ ಮೂಡಿಬಂದಿದೆ. ಗೌತಮ ತನ್ನ ಪಾತ್ರದಲ್ಲಿ ಪುರಾತನ ಧರ್ಮದ ವಿಚಾರಗಳನ್ನು ಮಂಡಿಸುವನು. ಇಲ್ಲಿಯ ಚರ್ಚೆಗಳು ಪಾತ್ರಗಳ ಮಧ್ಯೆ ನಡೆದರೂ ಓದುಗರು ಪಾತ್ರಮಯವಾಗಿ ಬಿಡುವಂತೆ ಕಂಡು ಬರುತ್ತದೆ. ಹಿಮ್ಮೇಳಗಳು ನಾಟಕದಲ್ಲಿ ಕಂಡು ಬರುವ ಹೊಸ ಪಾತ್ರಗಳ ಪರಿಚಯವನ್ನು ಮಾಡುವಂತದ್ದು, ಇಲ್ಲಿ ಕಂಡು ಬರುತ್ತದೆ. ಒಟ್ಟಿನಲ್ಲಿ ಈ ನಾಟಕ ಪಾತ್ರಗಳ ಜೀವಂತ ಪಾತ್ರಗಳಾಗಿ ಚಟುವಟಿಕೆಯಿಂದ ಕೂಡಿವೆ.

**ಭಾಷೆ:**

ಈ ನಾಟಕದಲ್ಲಿನ ಭಾಷೆ ಓದುಗರಿಗೆ ಆಕರ್ಷಣೆಯಿಂದ ಕೂಡಿದೆ. ಇಲ್ಲಿನ ಪ್ರಮುಖ ಪಾತ್ರಗಳಾದ ದೂತಿ ಮುಖಾಂತರ ಕವಿ ತಮ್ಮ ಪ್ರಾಂತದ ಭಾಷೆಯ ಗಟ್ಟಿತನವನ್ನು ತೋರಿಸಿದ್ದಾರೆ. ಗ್ರಾಮೀಣ ಸ್ತ್ರೀಯರ ಭಾಷೆಯು ಇಲ್ಲಿ ಚೆನ್ನಾಗಿ ಮೂಡಿಬಂದಿದೆ. ಉದಾಹರಣೆಗೆ: "ಆಭಾಡ್ಯಾರ ಬಾಯಾಗ ಮಣ್ಣ ಹಾಕಲಿ! ಅವರ ಹೆಣ ಸಿಂಗಾರ ಮಾಡಲಿ! ಇವರ ಬಾಯಾಗ ನೊಣ ಬಿಳಲಿ" ಎನ್ನುವಂತ ಮಾತು ಗ್ರಾಮೀಣ ಭಾಷೆಯ ಸೊಗಡು ಕಂಡು ಬರುತ್ತದೆ. ಈ ನಾಟಕದ ಭಾಷೆ ಗ್ರಾಮೀಣ ಭಾಷೆಯಾಗಿದ್ದರೂ ಸಾಹಿತ್ಯಿಕ ಅಂಶಗಳನ್ನು ಒಳಗೊಂಡ ಉತ್ತಮ ರೀತಿಯ ಭಾಷೆಯಾಗಿದೆ.

# ಅಧ್ಯಾಯ-೩

# ಆಧುನಿಕ ಕನ್ನಡ ಸಾಹಿತ್ಯದಲ್ಲಿ

# ಡಾ.ಬಸವರಾಜ ಸಬರದರ ಸ್ಥಾನ ಮಾನ

## ಅಧ್ಯಾಯ-೩

# ಆಧುನಿಕ ಕನ್ನಡ ಸಾಹಿತ್ಯದಲ್ಲಿ ಡಾ. ಬಸವರಾಜ ಸಬರದರ ಸ್ಥಾನಮಾನ

ಡಾ. ಬಸವರಾಜ ಸಬರದರು ಕನ್ನಡ ಸಾಹಿತ್ಯವನ್ನು ಅಭಿಮಾನ ಪೂರ್ವಕವಾಗಿ ಆರಾಧಿಸಿದ ಅಪರೂಪದ ಬರಹಗಾರರು. ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆ ಮರೆಯಲಾರದಂತಹದ್ದು. ಹೈದ್ರಾಬಾದ ಕರ್ನಾಟಕದ ಹೆಮ್ಮೆಯ ಬರಹಗಾರರಾದಂತಹ ಡಾ. ಬಸವರಾಜ ಸಬರದರು ಬಳಸುವ ಭಾಷೆ, ಶೈಲಿ, ಪದಬಂಧಗಳ ಸಂದರ್ಭಗಳು, ಅರ್ಥಗರ್ಭಿತ ಮತ್ತು ಆಕರ್ಷಣೆಯಿಂದ ಕೂಡಿವೆ. ಸಾಹಿತ್ಯದಲ್ಲಿ ಕಾವ್ಯ, ನಾಟಕ, ವಿಮರ್ಶಾ, ಸಂಶೋಧನೆಗಳಲ್ಲಿ ಅವರ ನಾಟಕ ಸಾಹಿತ್ಯದ ಕೊಡುಗೆ ತುಂಬಾ ವಿಶಿಷ್ಟವಾಗಿದೆ. ಅವರ ಬರಹದಲ್ಲಿನ ದೇಶಿಯತೆ, ಕಲ್ಪನೆ, ಗ್ರಾಮೀಣ ಚಿತ್ರಣಗಳು ವಿಶಿಷ್ಟವಾಗಿ ಮೂಡಿಬಂದಿವೆ.

ಇವರು ಬಂಡಾಯದ ಮನೋಭಾವನೆಯಿಂದ ಪರಿವರ್ತನೆಯ ಬಯಸಿದವರು. ಸಾಮಾಜಿಕ ಸಂದರ್ಭಗಳನ್ನು ತಮ್ಮ ಬರಹಕ್ಕೆ ಬಳಸಿಕೊಂಡರು. ವಿಡಂಬನೆ ತಿಳಿಹಾಸ್ಯದ ವ್ಯಂಗೆ, ವ್ಯಕ್ತಿಗಳ ಆತ್ಮ ಶೋಧನೆ, ಸಮಾಜದ ಶೋಷಿತ ಜನರ ಬಡವರ, ದೀನ ದಲಿತರ, ಸ್ತ್ರೀಯರ, ತಾತ್ವಿಕ ಚಿಂತನೆ ಇವರ ನಾಟಕ ಸಾಹಿತ್ಯದಲ್ಲಿ ಕಂಡು ಬಂದಿದೆ. ನಾಟಕವನ್ನು ಬರೆಯುವಾಗ ಪರಿವರ್ತನೆ ಉದ್ದೇಶಿತ ಗುರಿಯ ಸಂಕಲ್ಪ ಇದರಲ್ಲಿದೆ. ಸಾಹಿತ್ಯದ ಆಘಾದತೆಯನ್ನು ಪ್ರಜ್ಞಾಪೂರಕವಾಗಿ ಪರಿಭಾವಿಸಿ, ಬರವಣಿಗೆ ರೂಪಕ್ಕೆ ನೀಡಿದ್ದಾರೆ. ಹೊಸಗನ್ನಡ ಸಾಹಿತ್ಯದಲ್ಲಿ ಕಾವ್ಯ, ನಾಟಕ, ವಿಮರ್ಶಾ, ಸಂಶೋಧನೆ, ವಿಚಾರ ಸಾಹಿತ್ಯ, ಸಂಪಾದನೆ, ಲೇಖನಗಳು ಮುಂತಾದವು ಯಶಸ್ವಿಯಾಗಿ ತರುವ ಮುಖಾಂತರ ಡಾ. ಬಸವರಾಜ ಸಬರದರು ಪ್ರಮುಖ ಬರಹಗಾರರಾಗಿ ಕಂಡು ಬಂದಿದ್ದಾರೆ.

ಹೊಸಗನ್ನಡ ಸಾಹಿತ್ಯದಲ್ಲಿ ತಮ್ಮದೇಯಾದ ಬಂಡಾಯ ಮನೋಭಾವದ ಶೈಲಿಯಿಂದ ಗಮನ ಸೆಳೆದ ಡಾ. ಬಸವರಾಜ ಸಬರದರು ಹೊಸಗನ್ನಡ ಸಾಹಿತ್ಯದ ರೂಪ ರೇಷೆಗಳಿಂದ ತಮ್ಮ ಬರಹಕ್ಕೆ ವಿಶಿಷ್ಟವಾದ ಸ್ಥಾನವನ್ನು ಕಲ್ಪಿಸಿದ್ದಾರೆ. ಡಾ. ಬಸವರಾಜ ಸಬರದರ ಸಾಹಿತ್ಯವು ತುಂಬಾ ಪ್ರಭಾವ ಪೂರ್ಣ ಆಕರ್ಷಕವಾಗಿದೆ. ಅವರ ನಾಟಕಗಳು ಬಂಡಾಯ ಮನೋಭಾವದ ಸಮಾಜದ ಸಮಸ್ಯೆಗಳನ್ನು ಕಳಕಳಿಯಿಂದ ಕೂಡಿದೆ.

ಅವರು ಆಧುನಿಕ ಬಂಡಾಯ ಸಾಹಿತ್ಯದ ಬರಹಗಾರರಲ್ಲಿ ಮೇಲ್ ಪಂಕ್ತಿಯಲ್ಲಿ ಕಂಡು ಬರುತ್ತಾರೆ. ಇವರ ಸಾಹಿತ್ಯಿಕ ಕೊಡುಗೆ ಸ್ಮರಣೀಯವಾಗಿದೆ. ಡಾ. ಬಸವರಾಜ ಸಬರದರು ಅಪ್ರತಿಮ ಬರಹಗಾರರು, ಇವರು ಕಾವ್ಯ, ವಿಮರ್ಶೆ, ನಾಟಕಗಳಿಂದ ಗಮನ ಸೆಳೆಯುತ್ತಾರೆ.

ಅವರ ನಾಟಕಗಳಲ್ಲಿ ಸಮಾಜವು ಗಮನಿಸದೇ ಇರುವ ಅತೀ ಕೆಳಮಟ್ಟದ ಜೀವನವನ್ನು ವಸ್ತುವನ್ನಾಗಿ ಆರಿಸಿಕೊಂಡು, ಅವುಗಳಿಗೆ ಹೋರಾಟದ ಮುಖಾಂತರ ನ್ಯಾಯ ಒದಗಿಸುವಂತದ್ದು, ತಮ್ಮದೇಯಾದ ವಿಶಿಷ್ಟ ಕಲಾತ್ಮಕತೆಯಿಂದ, ಸೊಬಗಿನಿಂದ ಗಮನ ಸೆಳೆಯುತ್ತಾರೆ. ಅವರ ಸಾಹಿತ್ಯ ಮತ್ತು ನಾಟಕಗಳು ಓದುಗರಿಗೆ ಆಕರ್ಷಿಸುವಲ್ಲಿ ಯಶಸ್ವಿಯಾಗಿವೆ.

ಕನ್ನಡದಲ್ಲಿ ಅಸಂಗತ ನಾಟಕದ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಲು ಪ್ರತಿರೂಪ ನಾಟಕವನ್ನು ಅಸಂಗತದ ಧಾಟಿಯಲ್ಲಿ ಬರೆದಿದ್ದಾರೆ. ಗೀತ ನಾಟಕ, ಬೀದಿ ನಾಟಕಗಳು, ಜನ ಸಾಮಾನ್ಯರ ಬದುಕನ್ನು ಮತ್ತು ಇಂದಿನ ಸಾಮಾಜಿಕ ವ್ಯವಸ್ಥೆಯನ್ನು ರಾಜಕೀಯ ವ್ಯವಸ್ಥೆಯನ್ನು ಕುರಿತು ಹೇಳುವ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಅವರದೇಯಾದ ಕೊಡುಗೆಕೊಟ್ಟ ಬರಹಗಾರರಾಗಿ ಗಮನ ಸೆಳೆದಿದ್ದಾರೆ. ಹೊಸಗನ್ನಡ ಸಾಹಿತ್ಯದಲ್ಲಿ ಅವರ ಕೃತಿಗಳನ್ನು ಅವಲೋಕಿಸಿದಾಗ ಅವರ ಗಟ್ಟಿತನದ ಆಕರ್ಷಕ ಬರವಣಿಗೆಯಿಂದಾಗಿ ಓದುಗರ ಗಮನ ಸೆಳೆಯುತ್ತಾರೆ.

ಹೊಸಗನ್ನಡ ಸಾಹಿತ್ಯಕ್ಕೆ ತಮ್ಮದೇಯಾ ಶೈಲಿಯಿಂದ ಪ್ರಭಾವಗೊಳಿಸಿದ್ದಾರೆ. ನಾಟಕದ ಸಾಹಿತ್ಯದ ಪ್ರಭಾವದಿಂದ ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಹೊಸಗನ್ನಡದ ಬಂಡಾಯ ಘಟ್ಟದಲ್ಲಿ ಡಾ. ಬಸವರಾಜ ಸಬರದರು ಹನ್ನೊಂದು ಕಾವ್ಯಗಳು, ಎಂಟು ನಾಟಕ ಕೃತಿಗಳು, ನಾಲ್ಕು ವಿಚಾರ ಸಾಹಿತ್ಯ, ಹನ್ನೆರಡು ಸಾಹಿತ್ಯ ವಿಮರ್ಶೆ, ಐದು ಸಂಶೋಧನೆ ಕೃತಿಗಳು, ಹನ್ನೊಂದು ಇತರ ಪುಸ್ತಕಗಳು, ನಲವತ್ಮೂರು ಸಂಪಾದಿತ ಕೃತಿಗಳು, ಐವತ್ತೊಂದು ಸ್ವತಂತ್ರ ಕೃತಿಗಳು ಹೀಗೆ ನೂರಾರು ಕೃತಿಗಳನ್ನು ಬರೆದು ಸಾಹಿತ್ಯದಲ್ಲಿ ಸ್ಮರಣೀಯ ವ್ಯಕ್ತಿಯಾಗಿದ್ದಾರೆ.

ಡಾ. ಬಸವರಾಜ ಸಬರದರು ಸಾಹಿತ್ಯದ ಎಲ್ಲಾ ಪ್ರಕಾರಕ್ಕೆ ಓದುಗರ ಮನಸ್ಸು, ಏಕಾಗ್ರತೆಯಿಂದ ತಲೆತೂಗಿಸುವಂತೆ ಮತ್ತು ಕ್ರಾಂತಿಯ ವಿಚಾರಗಳನ್ನು ಮೂಡಿಸಿಕೊಳ್ಳುವಂತೆ ಮಾಡುತ್ತಾರೆ. ಅವರ ನಾಟಕಗಳಲ್ಲಿ ಸಾಧಿಸಿದ ಸಾಧನೆ ಅದ್ಭುತವಾಗಿದೆ. ಅವರ ಶೈಲಿ ಜನಮನ ಗೆದೆಯುವ ತನ್ನದೇಯಾದ ವಿಶಿಷ್ಟ ರೀತಿಯಿಂದ ಅಪ್ರತಿಮವಾಗಿ ಮೂಡಿ ಬಂದಿದೆ. ಇವರ ಸಾಹಿತ್ಯದ ಕೃಷಿಯು ಕನ್ನಡ ಸಾಹಿತ್ಯದಲ್ಲಿಯೇ ಒಂದು ವಿಶಿಷ್ಟ ಅಭಿವ್ಯಕ್ತಿಯಾಗಿ ರೂಪಗೊಂಡಿದೆ.

ಇವರು ತಮ್ಮ ಸಾಹಿತ್ಯದ ಬರಹಗಳಲ್ಲಿ ಸ್ವಂತಿಕೆ ಅಂಶಗಳು ನೀಡಿ, ಇಂದಿಗೂ ಹೊಸತನವನ್ನು ಕಾಪಾಡಿದ್ದಾರೆ. ಇವರ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು ಮತ್ತು ಬದುಕುವ ಕಲೆಯ ಬಗ್ಗೆ ಬೆಳಕು ಚೆಲ್ಲುತ್ತವೆ. ಇವರ ನಾಟಕ ಸಾಹಿತ್ಯದಲ್ಲಿ ಆಘಾದವಾದ ಹಾಸ್ಯ, ಬದುಕಿನ ದಿಕ್ಕು, ಸ್ವಾವಲಂಬಿಯ ಜೀವನ, ಬದುಕುವ ಕಲೆಯನ್ನು ಕಂಡು ಬಂದಿದೆ. ಅವರ ಹಾಸ್ಯಮಯ ಮಾತುಗಳಲ್ಲಿ ಗಾದೆ ಮಾತುಗಳು, ನಾಡು ನುಡಿಗಳಲ್ಲಿ ಸಾತ್ವಿಕದ ಸತ್ಯವಿದೆ. ಶೈಲಿಯಲ್ಲಿ ನಾವಿನ್ಯವಿದೆ. ಹೃದಯವನ್ನು ಮುಟ್ಟುವ ಮತ್ತು ಪರಿಣಾತ್ಮಕವಾಗಿ ಪರಿವರ್ತನೆ ಮಾಡುವುದಕ್ಕೆ ಎಲ್ಲರ ಮನಸ್ಸು ಸೆಳೆಯುತ್ತಾರೆ.

ಡಾ. ಬಸವರಾಜ ಸಬರದರು ಸಾಹಿತ್ಯದಲ್ಲಿ ತಾವು ವಿಶಿಷ್ಟ ಬರಹಗಾರರಾಗಿ ಅತ್ಯಂತ ಪ್ರೀಯರಾಗಿ ಗಮನ ಸೆಳೆದಿದ್ದಾರೆ. ಡಾ. ಬಸವರಾಜ ಸಬರದರು ಕನ್ನಡ ಸ್ವಾರಸ್ಯ ಲೋಕಕ್ಕೆ ತಮ್ಮ ಅಮೂಲ್ಯ ಕೃತಿಗಳನ್ನು ನೀಡುವುದರ ಮುಖಾಂತರ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಇಂದಿನ ಸ್ಥಿತಿಯಲ್ಲಿ ಇಂತಹ ಅಪ್ರತಿಮ ಬರಹಗಾರರು ಸಿಗುವುದು ತೀರಾವಿರಳ. ತಮ್ಮ ಬದುಕಿನುದ್ದಕ್ಕೂ ಅನೇಕ ಸಂಘರ್ಷ, ಹೋರಾಟಗಳ ಮುಖಾಂತರ ಸಾಹಿತ್ಯದ ಎಲ್ಲಾ ಕ್ಷೇತ್ರಗಳಲ್ಲಿಯೂ ಸೇವೆ ಮಾಡಿದ್ದಾರೆ. ವಿಶೇಷವಾಗಿ ಗ್ರಾಮೀಣ ಜನರ ದೈನಂದಿನ ಬದುಕಿನ ಬಗ್ಗೆ ಕಾಳಜಿ ವಹಿಸಿರುವುದು ವಿಶೇಷವಾಗಿದೆ. ನಾಡು ನುಡಿ, ಜನಪದ, ನಾಟಕ, ವಚನ ಸಾಹಿತ್ಯ, ದಾಸ ಸಾಹಿತ್ಯ, ದಲಿತರ ಸಂವೇದನೆ ಕುರಿತು ಸುಧೀರ್ಘವಾಗಿ ಈ ವರ್ಗದವರ ಪರವಾಗಿ ಮಾತನಾಡಬಲ್ಲ. ಅಪರೂಪದ ವ್ಯಕ್ತಿ ಇವರಾಗಿದ್ದಾರೆ. ತಮ್ಮ ಆಯುಶ್ಯದ ಬಹುಭಾಗವನ್ನು ಸಾಹಿತ್ಯಕ್ಕೆ ಮೀಸಲಿಟ್ಟವರಾಗಿದ್ದಾರೆ.

ಡಾ. ಬಸವರಾಜ ಸಬರದರ ಸಾಹಿತ್ಯ ಇನ್ನೂ ಸಾಕಷ್ಟು ರೀತಿಯಲ್ಲಿ ಬೆಳೆಸುತ್ತಿದ್ದಾರೆ. ಇವರ ಸಾಹಿತ್ಯದ ಕೃತಿ ನಿರಂತರವಾಗಿ ಮುಂದುವರೆದಿದ್ದು, ಕನ್ನಡಗರಿಗೆ ಸಂತೋಷದ ಹಾಗೂ ಹೆಮ್ಮೆಯ ವಿಷಯವಾಗಿದೆ. ಸಾಹಿತ್ಯದ ಬಂಡಾಯ ಘಟ್ಟಕ್ಕೆ ಇವರು ಎಂದೂ ಮರೆಯಲಾಗದ ತಾರೆಯಾಗಿ ಹೊಳೆಯುತ್ತಿದ್ದಾರೆ. ಡಾ. ಬಸವರಾಜ ಸಬರದರ ಸಾಹಿತ್ಯವು ನೇರವಾಗಿ ಸಮಾಜದ ಬಡ, ಕೂಲಿಕಾರರ, ಶೂದ್ರರ, ದಲಿತರ, ರೈತರ ಕುರಿತಾದ ವರ್ತಮಾನ ಮತ್ತು ಭವಿಷ್ಯದ ಸಮಸ್ಯೆಗಳನ್ನು ಕುರಿತು, ಆರೋಗ್ಯಕರ ಸಮಾಜ ನಿರ್ಮಾಣದ ವಿಚಾರಗಳು ಕಂಡು ಬರುತ್ತವೆ. ಅವರು ಸಮಾಜದ ಸಮಸ್ಯೆಗಳು ಬಹಳ ನಿಕಟವಾಗಿ ಕಂಡಿದ್ದಾರೆಂಬುವುದು ಅವರ ನಾಟಕವನ್ನು ಓದುವುದರಿಂದ ತಿಳಿಯುತ್ತದೆ. ಇವರ ಸಾಹಿತ್ಯದ ಯಾವುದೇ ಕ್ಷೇತ್ರದ ವಸ್ತುಗಳು ಆಯ್ದುಕೊಂಡದ್ದು, ಸಮಾಜದ ಕೆಳಸ್ಥರದ ಜೀವನ ಕುರಿತು ಮತ್ತು ಪ್ರಕೃತಿಯನ್ನು ಕುರಿತು ಕಾಳಜಿ ಹೊಂದಿರುವುದು ಕಂಡು ಬರುತ್ತದೆ.

ಅವರು ನಿರೂಪಿಸಿದ ವಿಚಾರಗಳು ಓದುಗರ ಮನಸ್ಸಿಗೆ ತೀಕ್ಷ್ಣವಾಗಿ, ನೇರವಾಗಿ ಮನಸ್ಸಿಗೆ ಮುಟ್ಟಬಲ್ಲ. ಮತ್ತು ಪರಿವರ್ತನೆಗೊಳ್ಳುವಂತದ್ದು, ಕಾಣಬಹುದಾಗಿದೆ. ಇವರ ನಾಟಕ ಸಾಹಿತ್ಯಕಾರರಾಗಿ, ಕಲಾವಿದರಾಗಿ ರಂಗದ ಮೇಲೆ ಅನೇಕ ಪ್ರದರ್ಶನಗಳನ್ನು ಮಾಡಿ, ಜನಮನದಲ್ಲಿ ಹಚ್ಚು ಹಸಿರಾಗಿ ನಿಂತಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಪ್ರಮುಖ ಬಂಡಾಯ ಸಾಹಿತಿಗಳ ಪ್ರಮುಖ ನಾಟಕಕಾರರಾದ ಸತ್ಯಾನಂದ ಪಾತ್ರೋಟ, ಎಚ್.ಎಸ್. ಶಿವಪ್ರಕಾಶ, ಕೆ.ಎ. ಭಗವಾನ, ಅರವಿಂದ ಮಾಲಗತ್ತಿ, ಚಂದ್ರಕಾಂತ ಕುಶನೂರ ಇಂತಹ ಅನೇಕ ಮುಖಂಡರ ಸಾಲಿನಲ್ಲಿ ನಿಲ್ಲಬಲ್ಲ ವ್ಯಕ್ತಿಯಾಗಿ ಹೊರಹೊಮ್ಮಿದ್ದಾರೆ. ಅವರು ಕನ್ನಡ ನಾಟಕ ಸಾಹಿತ್ಯದಲ್ಲಿ ತಮ್ಮದೇಯಾದ ಸ್ಥಾನಮಾನ ಹೊಂದಿದ್ದಾರೆ.

ಭಾಷಾ ದೃಷ್ಟಿಯಿಂದ ಇವರ ಸಾಹಿತ್ಯ ನಾಟಕವು ದೇಶಿಯವಾಗಿ ಸರಳವಾದ ಗ್ರಾಮೀಣ ಜನರ ಆಡುವ ಮಾತಿನ ಧಾಟಿಯಲ್ಲಿರುವುದು ಇದು ಜನಸಾಮಾನ್ಯರ ಮನದ ಹತ್ತಿರಕ್ಕೆ ನಿಲ್ಲುತ್ತದೆ. ಓದುಗರ ಮತ್ತು ಸಾಹಿತ್ಯದ ನಡುವೆ ಒಂದು ರೀತಿಯ ಸಂಬಂಧವನ್ನು ಏರ್ಪಡಿಸುವಂತೆ ಕಾಳಜಿ ವಹಿಸಿದ್ದಾರೆ. ಇವರ ಸಾಹಿತ್ಯ ಜೀವನದ ಒಂದು ಭಾಗವಾಗಿ ಕಂಡು ಬಂದಿದೆ. ಅದು ಜನಮನ ಮುಟ್ಟಿಸುವಲ್ಲಿ ಯಶಸ್ವಿ ಕಂಡಿದ್ದಾರೆ ಎಂದು ಹೇಳಬಹುದು. ಈ ಉದ್ದೇಶವೇ ಲೇಖಕರ ಮಹಾದಾಸೆ ಇರುವಂತದ್ದು, ಕಂಡು ಬರುತ್ತದೆ. ನಾಟಕ ಸಾಹಿತ್ಯವು ಆಧುನಿಕ ಘಟ್ಟದ ಸಂದರ್ಭದಲ್ಲಿ ಸದ್ಯದ ಪರಿಸ್ಥಿತಿಯ ಎಲ್ಲಾ ಸಮಸ್ಯೆಗಳ ಪರಿಹಾರ ಹುಡುಕುವಲ್ಲಿ ಯಶಸ್ವಿ ಕಂಡಿವೆ ಎಂಬುವುದು ಈ ನಾಟಕ ಓದುವುದರಿಂದ ತಿಳಿದು ಬರುತ್ತದೆ.

"ಡಾ. ಬಸವರಾಜ ಸಬರದ ಅವರು ಎಂತಹ ಪ್ರತಿಕೂಲ ಪರಿಸ್ಥಿತಿಗಳನ್ನು ಎದುರಿಸಿ, ಸಹಿಸಿ ತಮ್ಮ ಸಾಹಿತ್ಯಿಕ ಜಿಗುಟುತನವನ್ನು ಉಳಿಸಿಕೊಂಡು, ಚಿಗುರುತ್ತಿರುವ ಲೇಖಕರು, ಕವಿ, ನಾಟಕಕಾರ, ವಿಮರ್ಶಕ, ಸಂಪಾದಕ ಮುಂತಾದ ಟಿಸಿಲುಗಳನ್ನು ಬೆಳೆಸಿಕೊಂಡು, ಹಬ್ಬುತ್ತಿರುವ ಮರದಂತೆ ಬೆಳೆಯುವ ಸಾಹಿತಿ, ಈಗಾಗಲೇ ಇವರು ಅಪಾರ ಸಾಹಿತ್ಯದ ಕೊಡುಗೆಯಿಂದ ವಿದ್ವಾಂಸರ ಗಮನ ಸೆಳೆದಿದ್ದಾರೆ" ಎಂಬ ಮಾತು ಖ್ಯಾತ ಸಾಹಿತಿಗಳಾದ ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ ಅವರ ವಿಚಾರವಾಗಿದೆ. ಇದು ಡಾ. ಬಸವರಾಜ ಸಬರದರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

# ಅಧ್ಯಾಯ–೪
# ಸಮಾರೋಪ

ಮಾನವ ಜೀವನದಲ್ಲಿ ಮಾನವೀಯ ಅಂಶಗಳು ಬಹಳಷ್ಟು ಮುಖ್ಯವಾದವುಗಳಾಗಿವೆ. ಇವು ಮಾನವನ ಜೀವನವನ್ನು ಸಹಕಾರಗೊಳಿಸುತ್ತವೆ. ಮಾನವ ತನ್ನ ಜೀವನದಲ್ಲಿ ಶಾಂತಿ, ನೆಮ್ಮದಿ, ಭದ್ರತೆಗಾಗಿ ಮಾಡಿಕೊಂಡ ವ್ಯವಸ್ಥೆಗಳು ಮತ್ತು ಸಾಧನೆಗಳೇ ಬರಬರುತ್ತಾ ಅವನ ಶೋಷಣೆಯ ಸಾಧನೆಗಳಾದವು. ಆಳುವ ವ್ಯವಸ್ಥೆ, ವೃತ್ತಿ ಆಧಾರಿತ ಜಾತಿ ಪದ್ಧತಿ, ರೂಢಿ ಮೂಲ ಧರ್ಮ, ಅಧಿಕಾರ ಕೇಂದ್ರಿತ ರಾಜಕೀಯ, ಅಭದ್ರ ಸಾಮಾಜಿಕತೆ ಮುಂತಾದವುಗಳ ಸಮಾಜದಲ್ಲಿ ಮೇಲು ಕೀಳು, ಭಾವನೆ ಬೆಳೆಯಲು ಸಹಾಯಕವಾದವು. ಅಷ್ಟೇ ಅಲ್ಲದೇ ಇವು ಮಾನವನಲ್ಲಿ ಅಸಮಾನತೆಯ ಅಸಹಕಾರ ಮೂಡಿಸಿ, ಪರಸ್ಪರ ಮಾನವರಲ್ಲಿ ದ್ವೇಷ ಹುಟ್ಟುವಂತೆ ಮಾಡಿದವು. ಅಸಂಖ್ಯಾತ ಜನರು ಶೋಷಣೆಗೆ ಒಳಗಾಗುವಂತೆ ಮಾಡಿದವು.

ಈ ಶೋಷಣೆಯನ್ನು ವಿರೋಧಿಸುವ ಸಾಹಿತ್ಯವೇ ಬಂಡಾಯ. ಇವೆ ವಿಚಾರಗಳು ಡಾ. ಬಸವರಾಜ ಸಬರದರ ನಾಟಕಗಳಲ್ಲಿ ಕಂಡು ಬರುತ್ತವೆ. ಮಾನವನನ್ನು ಕೇಂದ್ರವಾಗಿಟ್ಟುಕೊಂಡು, ಶೋಷಣಾ ರಹಿತವಾದ ಸಮಾಜ ಮತ್ತು ಸುಖಿ ಸಮಾಜದ ನಿರ್ಮಾಣ ಮಾಡುವುದೇ ಇವರ ನಾಟಕದ ಗುರಿಯೆಂದು ಸ್ಥೂಲವಾಗಿ ಹೇಳಬಹುದು. ಈ ನಾಟಕಗಳಲ್ಲಿನ ಮಾನವೀಯ ಮೌಲ್ಯಗಳಾದ ಪ್ರೀತಿ, ಪ್ರೇಮ, ಸ್ನೇಹ, ಸಹಕಾರ, ಸಹೋದರತ್ವ, ಸಹಬಾಳ್ವೆ, ಸಮಾನತೆ ಸಿಗಬೇಕಾದ ನ್ಯಾಯ, ಬಡವರ ಬದುಕಿನ ಸ್ಥಿತಿ, ರೈತರ ಜೀವನ, ಶೋಷಿತರ ಬದುಕು, ಇವೆಲ್ಲವೂ ಸಬರದರ ನಾಟಕದ ತಾಯಿ ಬೇರಿನ ಸ್ಥಾನದಲ್ಲಿವೆ. ಆಧುನಿಕ ಯುಗದ ಸಂಕೀರ್ಣ ಬದುಕಿನಲ್ಲಂತು ಇವುಗಳ ಅವಶ್ಯಕತೆ ತುಂಬಾ ಹೆಚ್ಚಾಗಿದೆ.

ಹೊಸಗನ್ನಡ ನವೋದಯ ಘಟ್ಟದಲ್ಲಿ ನಾಟಕ ಅಂಶಗಳು ಹೆಚ್ಚು ಮನೋರಂಜನೆ, ಪುರಾಣ ಕಥೆಗಳು, ಸಹಜವಾದ ಬದುಕಿನ ಚಿತ್ರಗಳು ಕಂಡು ಬಂದಿವೆ. ಅವರಲ್ಲಿ ಶಿವರಾಜ ಕಾರಂತರ ನಾಟಕಗಳು, ಬಿ.ಎಂ. ಶ್ರೀ ಅವರ ನಾಟಕಗಳು, ಕುವೆಂಪು ಅವರ ನಾಟಕಗಳು, ಪು.ತಿ.ನ. ಅವರ ನಾಟಕಗಳು ಪ್ರಮುಖವಾಗಿವೆ. ಮುಂದೆ ಬಂದ ನವ್ಯ ಘಟ್ಟದಲ್ಲಿ ಸಮಾಜ, ಸಮಾಜದಲ್ಲಿನ ಜನರ ಪರಿಸ್ಥಿತಿ ಅವರ ಜೀವನ, ಪ್ರೀತಿ ಪ್ರೇಮ, ಬದುಕುಗಳನ್ನು ಗುರುತಿಸಬಹುದು. ಈ ಘಟ್ಟದ ಪ್ರಮುಖ

ಕವಿಗಳಲ್ಲಿ ಚಂದ್ರಶೇಖರ ಕಂಬಾರ, ಗಿರಿಶ ಕಾರ್ನಾಡ, ಚಂದ್ರಶೇಖರ ಪಾಟೀಲ, ಚಂದ್ರಕಾಂತ ಕುಶನೂರ, ಲಂಕೇಶ, ತೇಜಸ್ವಿ ಮುಂತಾದವರನ್ನು ಗುರುತಿಸಬಹುದು. ಬಂಡಾಯ ಘಟ್ಟದಲ್ಲಿ ನಾಟಕದ ವಸ್ತು ನೈಜ್ಯ ಬದುಕಿನ ಸಮಸ್ಯೆಗಳು, ಆ ಸಮಸ್ಯೆಗಳಿಗೆ ಪರಿಹಾರ, ಸಮಾನತೆಗಾಗಿ ಹೋರಾಟ ಮಾಡಬೇಕೋ, ಹೋರಾಟದ ಬದುಕಿನ ರೀತಿ ನೀತಿಯೇ ಪಾಠಗಳು, ಪ್ರಕೃತಿಯ ರಕ್ಷಣೆ, ಸಾಮಾನ್ಯ ಮನುಷ್ಯನ ಬದುಕಿನ ಬಗ್ಗೆ, ಹೊಟ್ಟೆ ತುಂಬಿಸಿಕೊಳ್ಳುವ ವಿಚಾರಗಳು, ವರ್ಣಾಶ್ರಮ, ಧರ್ಮ, ಜಾತಿಯತೆ, ಮೇಲು ಕೀಳು, ಅಸಮಾನತೆ, ಶೋಷಣೆ ವಿರುದ್ಧ ಸಿಡಿದೆದ್ದ ವಿಷಯಗಳು ಅವರ ನಾಟಕದ ವಸ್ತುವಾಗಿ ಆಯ್ಕೆಗೊಂಡಿವೆ.

ಕನ್ನಡ ಸಾಹಿತ್ಯದಲ್ಲಿ ಸಾಹಿತ್ಯದಂತೆ, ಸಾಹಿತಿಯು, ಜನರ ಹತ್ತಿರವಾಗಿರಬೇಕು. ಸಾಹಿತ್ಯದ ಜೊತೆಗೆ ಕವಿಯ ಬದುಕು ಸೇರಬೇಕು. ನುಡಿದಂತೆ ನಡೆದವರು, ಬರೆದಂತೆ ಬದುಕಿದವರು ನಮ್ಮ ಕವಿಗಳು. ಆದ್ದರಿಂದ ಕನ್ನಡ ಸೃಜನ ಸಾಹಿತ್ಯ ಸೃಷ್ಟಿಕಾರರು, ಸಾಹಿತ್ಯ ಕ್ಷೇತ್ರಗಳಲ್ಲಿ ಪ್ರಮುಖವೆನಿಸಿದ್ದಾರೆ. ಕವಿ ಸಾಹಿತಿ, ಲೇಖಕ, ಮುಂತಾದವರ ಬದುಕಿನೊಂದಿಗೆ ಅವರ ಸಾಹಿತ್ಯ ಅಧ್ಯಯನವು ನಡೆದರೆ ಸಮಗ್ರತೆಗೆ ಇಮ್ಮು ಬರುತ್ತದೆ.

ಈ ನಿಟ್ಟಿನಲ್ಲಿ ಜನಪ್ರೀಯ ಕವಿ ಲೇಖಕರಾದ ಡಾ. ಬಸವರಾಜ ಸಬರದರ ಬದುಕು ಹಾಗೂ ಸಾಹಿತ್ಯ, ಸಂಪಾದನೆ, ಸಂಶೋಧನೆ, ಕಾವ್ಯ, ನಾಟಕ, ವಿಮರ್ಶೆ ಮುಂತಾದವು ಸೃಜನ ಕಾರ್ಯಗಳ ಅಧ್ಯಯನ ಮಾಡುವುದರೊಂದಿಗೆ ಅವರ ಹುಟ್ಟಿ ಬೆಳೆದ ಪರಿಸರ, ಅವರ ಮನೋಭಾವ, ಶೈಕ್ಷಣಿಕ ವಿಚಾರಗಳು ಹೀಗೆ ಹಲವಾರು ವೈಪರಿತ್ಯಗಳಿಂದ ಕೂಡಿದ ಬದುಕಿನೊಂದಿಗೆ ಸಾಹಿತ್ಯದ ಉಗಮವನ್ನು ಗುರುತಿಸಬಹುದು. ಡಾ. ಬಸವರಾಜ ಸಬರದರು 'ಹೋರಾಟ' ಎಂಬ ಕಾವ್ಯದೊಂದಿಗೆ ಸಾಹಿತ್ಯ ಲೋಕದ ಪಾದಾರ್ಪಣೆ ಮಾಡಿ, ಅನೇಕ ಕಾವ್ಯ ನಾಟಕಗಳನ್ನು, ಅನುವಾಮ ವಿಮರ್ಶೆಗಳು ಲೇಖನಗಳೊಂದಿಗೆ ಸಾಹಿತ್ಯಕ್ಕೆ ದುಮುಕಿದರು.

ಅವರು ಬರೆದ 'ಹೋರಾಟ' ಕಾವ್ಯದೊಂದಿಗೆ ಅವರ ಬದುಕೂ ಹೋರಾಟಮಯವಾಗಿ ಮಾಡಿಕೊಂಡು, ಬದುಕುತ್ತಿದ್ದಾರೆ. ವಿಶಾಲವಾದ ಕನ್ನಡ ಸಾಹಿತ್ಯದಲ್ಲಿ ಇವರ ಸಾಹಿತ್ಯ ಎತ್ತರದ ಬೆಟ್ಟದ ಹಾಗೆ ನಿಲ್ಲುತ್ತದೆ. ಇವರ ಸಮಗ್ರವಾದ ನಾಟಕಗಳನ್ನು ವರೆಗೆ ಹಚ್ಚಿ ನೋಡಿದಾಗ ಅವರ ಎಲ್ಲಾ ನಾಟಕಗಳು ಅಪರಂಜಿ ಹಾಗೆ ಹೊಳೆಯುತ್ತವೆ.

ಡಾ. ಬಸವರಾಜ ಸಬರದರು ಒಬ್ಬ ವಿಶಿಷ್ಟ ಬರಹಗಾರರಾಗಿ ಸಾಹಿತ್ಯ ಲೋಕದಲ್ಲಿ ಕಂಡು ಬರುತ್ತಾರೆ. ವಿಶಿಷ್ಟ ಪ್ರತಿಭೆಯಿಂದ ಸಾಹಿತ್ಯ ರಚನೆ ಮಾಡಿ, ಅವುಗಳಲ್ಲಿ ತಮ್ಮದೇಯಾದ ಸ್ವಂತಿಕೆಯನ್ನು ನೀಡಿ, ಗಮನ ಸೆಳೆದಿದ್ದಾರೆ. ಅವರ ಸುಧೀರ್ಘವಾದ ಬರಹದಿಂದ ಅದ್ಭುತವಾದ ವಿಚಾರಗಳೊಂದಿಗೆ, ಓದುಗರಿಗೆ ಬೆರಗುಗೊಳಿಸಿದ್ದಾರೆ. ಇಂತಹ ಅದ್ಭುತ ವ್ಯಕ್ತಿಯ ಜೀವನ ಸಾಹಿತ್ಯ ನಾಟಕದ ಕುರಿತು ಬೆಳಕು ಚೆಲ್ಲುವ ದೃಷ್ಟಿಯಿಂದಲೇ ಈ ಸಂಶೋಧನೆ ಕೈಗೊಳ್ಳಲಾಗಿದೆ. ಅವರ ವೃತ್ತಿ ಪ್ರವೃತ್ತಿಯೊಂದಿಗೆ ಅವರ ವ್ಯಕ್ತಿತ್ವದ ಕಿರು ಪರಿಚಯ ಮಾಡಲಾಗಿದೆ. ಅವರ ಸಾಹಿತ್ಯ ಸೃಷ್ಟಿಸುವ ಕಲೆ, ಆಕರ್ಷಣೆ ಅದ್ಭುತವಾಗಿದೆ. ಡಾ. ಬಸವರಾಜ ಸಬರದರು ಕಾವ್ಯ ವಿಮರ್ಶೆ, ನಾಟಕ ಸಂಶೋಧನೆ, ಅನುವಾದ ಲೇಖನಗಳು ಬರೆಯುವಲ್ಲಿ ಸಮರ್ಥರು ಎಂಬುವುದು ಅವರ ಸಾಹಿತ್ಯದಿಂದ ಸಾಬಿತ್ತುಗೊಳಿಸಿದ್ದಾರೆ.

ನಾಟಕ ಕ್ಷೇತ್ರಕ್ಕೆ ತಮ್ಮದೇಯಾದ ದೃಷ್ಟಿಕೋನದಿಂದ ಕಂಡು, ನಾಟಕದ ಎಲ್ಲಾ ಪ್ರಕಾರಗಳಲ್ಲಿ ಕಾರ್ಯ ಮಾಡಿದ್ದಾರೆ. ಅಸಂಗತ, ಗೀತ, ಬೀದಿ ನಾಟಕಗಳು, ದೊಡ್ಡಾಟ ಹೀಗೆ ಇವುಗಳ ಬಗ್ಗೆ ಸಂಕ್ಷಿಪ್ತವಾಗಿ ಅವಲೋಕನ ಕ್ರಮದಿಂದ ವಿಶಿಷ್ಟ ದೃಷ್ಟಿಕೋನಗಳಿಂದ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಡಾ. ಬಸವರಾಜ ಸಬರದರು ಕನ್ನಡ ಶ್ರೇಷ್ಠ ನಾಟಕಕಾರರ ಸಾಹಿತ್ಯಗಳ ಪಂಗ್ತಿಗೆ ಇವರ ಹೆಸರು ಸೇರುವುದು ಯೋಗ್ಯವಾಗಿದೆ. ಅವರು ತಮ್ಮದೇಯಾದ ಸ್ವ ಪ್ರಯತ್ನದಿಂದ ಕನ್ನಡ ನಾಟಕಕಾರರಲ್ಲಿ ಸ್ಥಾನ ಪಡೆದುಕೊಂಡಿದ್ದಾರೆ. ಸಾಹಿತ್ಯದ ಹೆಚ್ಚು ಕಡಿಮೆ, ಎಲ್ಲಾ ಕ್ಷೇತ್ರಗಳಲ್ಲಿ ಕೆಲಸ ಮಾಡಿದ ಇತರರ ನಾಟಕಕಾರರಿಗೆ ತಾವು ಕಮ್ಮಿ ಇಲ್ಲ ಎಂಬುವುದು ಸಾಬಿತ್ತು ಪಡಿಸಿದ್ದಾರೆ. ಕೇವಲ ಇದು ಹೊಗಳಿಕೆ ಅಲ್ಲ. ಅವರ ನಾಟಕಗಳಲ್ಲಿ ಕಂಡು ಬರುವ ಅಂಶಗಳಾಗಿವೆ.

ಆಧುನಿಕ ಕನ್ನಡ ನಾಟಕ ಸಾಹಿತ್ಯದ ನಿರ್ಮಿತಿಯಲ್ಲಿ ವಿಶೇಷವಾಗಿ ಬಂಡಾಯ ಕಾಲ ಘಟ್ಟದಲ್ಲಿ ಇವರ ಪಾತ್ರ ಬಹುಮುಖ್ಯವಾಗಿದೆ. ಇವರ ನಾಟಕದ ಎಲ್ಲಾ ಪ್ರಕಾರದ ನಾಟಕಗಳು ಬರೆದಿದ್ದಾರೆ. ಅವುಗಳಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಶೈಕ್ಷಣಿಕ, ಮನುಷ್ಯರ ಬದುಕಿನ ಎಲ್ಲಾ ಮುಖಗಳ ಬಗ್ಗೆ ಅಧ್ಯಯನ ಮಾಡಿರುವಂತದ್ದು, ನಾಟಕ ವಸ್ತುವಿನ ಆಯ್ಕೆಯಲ್ಲಿ ಡಾ. ಬಸವರಾಜ ಸಬರದರು ಸ್ವಾತಂತ್ರ ಮನೋಭಾವನೆ ಹೊಂದಿದ್ದಾರೆ. ತಮ್ಮ ನಾಟಕದ ವಸ್ತುಗಳು ಇಂದಿನ ಜ್ವಲಂತ ಸಮಸ್ಯೆಗಳಿಗೆ ಹೆಚ್ಚು ಒತ್ತು ಕೊಟ್ಟಿದ್ದು ಕಂಡು ಬರುತ್ತದೆ. ಇವರ ನಾಟಕಗಳಲ್ಲಿ ಸಾಮಾಜಿಕ ಕಳಕಳಿ ಹೊಂದಿದ್ದು ಸ್ಪಷ್ಟವಾಗಿದೆ. ತಮ್ಮ ನಾಟಕಗಳಲ್ಲಿ ಬಡವರ, ಕೂಲಿ ಮಾಡುವ,

ಶೋಷಿತ ವ್ಯಕ್ತಿಗಳ, ಸ್ತ್ರೀಯರ, ರೈತರ, ರಾಜಕೀಯ ವ್ಯಕ್ತಿಗಳ, ಸ್ವಾಮಿ ಪೂಜಾರಿಗಳ, ಅಧಿಕಾರ ವರ್ಗದವರ ಕುರಿತು ವಿಮರ್ಶಾತ್ಮಕವಾಗಿ ನಾಟಕದಲ್ಲಿ ಚಿತ್ರಿಸಿದ್ದಾರೆ. ಸ್ತ್ರೀಯರ ಅಸಹಾಯಕತೆಯ ಬಗ್ಗೆ ಸ್ತ್ರೀ ಸಂಘಟನೆಗಳು ಜಾಗೃತರಾಗಬೇಕೆಂಬುವುದು ಹೇಳಿದ್ದಾರೆ.

ಇವರ ನಾಟಕ ಕ್ಷೇತ್ರಕ್ಕೆ ಹೆಚ್ಚಿನ ಒಲವು ತೋರಿಸಿ, ಸುಮಾರು ಹದಿನೇಳು ನಾಟಕಗಳು ರಚನೆ ಮಾಡಿದ್ದಾರೆ. ಇದು ಕನ್ನಡ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯಾಗಿದೆ. ಅವರ ಎಲ್ಲಾ ನಾಟಕಗಳ ಅಧ್ಯಯನ ಕುರಿತ ವಿಚಾರವಾಗಿದೆ. ಡಾ. ಸಬರದರ ಬದುಕಿನ ಧ್ವನಿಯು ಸಾಹಿತ್ಯದಲ್ಲಿ ಹಿಡಿದಿಟ್ಟಿದ್ದಾರೆ. ಅವರ ಬಂಡಾಯ ಬದುಕಿನ ಚಿತ್ರಣದ ಪ್ರಭಾವಗಳು ಅವರ ನಾಟಕಗಳಲ್ಲಿ ಕಂಡು ಬರುತ್ತವೆ. ಮಾನವ ಮೂಲತಃ ಸಮಾಜ ಜೀವಿಯಾಗಿದ್ದರಿಂದ, ಸಮಾಜದಲ್ಲಿರುವ ಅಸಮಾನತೆ ಮೇಲು, ಕೀಳು ಭಾವನೆ ಇವುಗಳಿಂದ ಮಾನವನು ಶೋಷಣೆಯನ್ನು ಅನುಭವಿಸಿ, ಪ್ರಾಣಿಗಳಿಗಿಂತ ಕೀಳಾಗಿ, ಜೀವಿಸುವಂತದ್ದು, ಅವರ ನಾಟಕ ಸಾಹಿತ್ಯದಲ್ಲಿ ಪ್ರತಿಭಟಿಸುತ್ತದೆ. ಸಮಾಜದಲ್ಲಿ ಮಾನವನೇ ಪ್ರಮುಖ, ಅವನನ್ನು ಗೌರವದಿಂದ ಕಾಣಬೇಕು ಎಂಬುವುದನ್ನು ನಾಟಕ ಒತ್ತಿ ಹೇಳುತ್ತದೆ.

ಈ ನಾಟಕಗಳು ಕೇವಲ ಮನುಷ್ಯನ ಬಗ್ಗೆ ಚಿಂತಿಸದೇ ಸಕಲ ಜೀವಿಗಳನ್ನು ಪ್ರಕೃತಿಯನ್ನು ಕುರಿತು ಚಿಂತಿಸುತ್ತದೆ. ಒಟ್ಟಿನಲ್ಲಿ ನಾಟಕದ ಪ್ರಮುಖ ಗುರಿ ಜಗತ್ತಿನಲ್ಲಿ ಎಲ್ಲರೂ ಸಮಾನವಾಗಿ ಬದುಕಬೇಕೆಂದು ತಿಳಿಸುತ್ತದೆ. ಇಂತಹ ಧೋರಣೆಗೆ ಮೂಲ ಕಾರಣ ಕವಿಯ ಬಂಡಾಯ ಮನೋಭಾವ ಮತ್ತು ಹೊಸಗನ್ನಡ ಕವಿಗಳಲ್ಲಿರುವ ಮಾನವೀಯ ಕಳಕಳಿ ಎಂಬುವುದು ಸ್ಪಷ್ಟವಾಗಿದೆ. ಇಂತಹ ವಿಚಾರಗಳು ಹೇಗೆ ಮೂಡಿ ಬಂದಿವೆ ಎಂಬುವುದು ಈ ಪ್ರಬಂಧ ವಿವರಿಸುತ್ತದೆ.

ಸಮಾಜದಲ್ಲಿ ಹೊಸ ಬದಲಾವಣೆಯನ್ನು ತಂದವರು ಅವರ ಮಾನವೀಯ ಮೌಲ್ಯಗಳನ್ನು ರೂಪಿಸಲು ಹಂಬಲಿಸಿದವರು, ರೊಚ್ಚಿನ ಸಾಹಿತ್ಯ ನಾಟಕಗಳು ರಚಿಸಿದವರು, ದುಡಿಯುವ ಮತ್ತು ಕೆಳವರ್ಗದ ಜನರಿಗೆ ಸ್ವಾತಂತ್ರ್ಯತೆ ಮತ್ತು ಸಮಾನತೆ ಬೇಕು ಎಂದು ಹೇಳಿ, ಪರಂಪರೆ ಬೇರುಗಳನ್ನು ಕಿತ್ತುಹಾಕಿ, ಮಾನವ ಸಮಾಜದ ನಿರ್ಮಾಣಕ್ಕೆ ಅವರು ಪ್ರಯತ್ನಿಸಿದ್ದಾರೆ. ಕನ್ನಡ ಸಾಹಿತ್ಯ ಕ್ಷೇತ್ರದ ೨೦ನೇ ಶತಮಾನದ ಕೊನೆಯಲ್ಲಿ ಬದಲಾವಣೆ ಹೊಂದುತ್ತಿರುವ ಹೊಸಗನ್ನಡ ಕೊನೆ ಘಟ್ಟದಲ್ಲಿ ದಲಿತ ಬಂಡಾಯ ಸಾಹಿತ್ಯ ಮಾನವೀಯ ಗುಣವನ್ನು ಎತ್ತಿ ಹಿಡಿಯುವುದರೊಂದಿಗೆ ಸಾಮಾಜಿಕ

ಬದುಕಿಗೆ ಹೊಸ ವಾತಾವರಣವನ್ನು ನಿರ್ಮಿಸಿದೆ ಎಂಬುವುದನ್ನು ಕಂಡುಬರುತ್ತದೆ. ಬಂಡಾಯ ಕವಿಗಳಾದ ಬರಗೂರು ರಾಮಚಂದ್ರಪ್ಪ, ಅರವಿಂದ ಮಾಲಗತ್ತಿ, ದೇವನೂರು ಮಹಾದೇವ ಇವರ ಪಂಗ್ತಿಯಲ್ಲಿ ಡಾ. ಬಸವರಾಜ ಸಬರದರು ಸೇರುತ್ತಾರೆ.

ಸಾಮಾಜಿಕ ಬದುಕಿಗೆ ಹೊಸ ವಾತಾವರಣವನ್ನು ನಿರ್ಮಿಸುವುದು. ಈ ಪ್ರಬಂಧದಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ. ಒಟ್ಟಿನಲ್ಲಿ ಮಾನವ ಜೀವನಕ್ಕೆ ಅವಶ್ಯಕವಾದ ಮಾನವೀಯತೆ ಮಾನವನನ್ನು ಪ್ರೀತಿಸಬೇಕೋ, ಸಮಾಜದಲ್ಲಿ ಎಲ್ಲರೂ ಸಮನಾಗಿ ಬಾಳಿದಾಗ ಆವಾಗ ಮಾತ್ರ ಮಾನವನ ಜೀವನಕ್ಕೆ ಬೆಲೆ ಬರುತ್ತದೆ. ತಾನು ಬದುಕಬೇಕೊ ಇತರರಿಗೆ ಬದುಕಲು ಅವಶಕಾ ನೀಡಬೇಕೊ, ಮೊದಲು ಮಾನವ ನಂತರ ಉಳಿದೆಲ್ಲಾ. ಅದಕ್ಕಾಗಿ ಮಾನವೀಯ ಗುಣಕ್ಕೆ ಗೌರವಿಸಬೇಕೋ ಎಂಬ ವಿಚಾರದೊಂದಿಗೆ "ಸರ್ವರಿಗೂ ಸಮಬಾಳು, ಸರ್ವರಿಗೂ ಸಮಪಾಲು" ಎಂಬ ವಿಚಾರವನ್ನು ಡಾ. ಬಸವರಾಜ ಸಬರದರ ನಾಟಕಗಳ ಅಧ್ಯಯನದ ಉದ್ದೇಶದೊಂದಿಗೆ ಈ ಪ್ರಬಂಧವನ್ನು ಮಂಡಿಸುತ್ತೇವೆ. ಈ ಅಧ್ಯಯನ ನನ್ನ ಅನುಭವದ ಮಿತಿಯೊಳಗೆ ಒಳಗೊಂಡಿದೆ.

## ಡಾ. ಬಸವರಾಜ ಸಬರದರ ನಾಟಕಗಳ ಕುರಿತು ವಿಮರ್ಶಕರ ಅಭಿಪ್ರಾಯ

### ಪ್ರತಿರೂಪ ನಾಟಕಗಳ ಕುರಿತ ವಿಮರ್ಶಕರ ಅಭಿಪ್ರಾಯ

ಡಾ. ಬಸವರಾಜ ಸಬರದರ ಪ್ರತಿರೂಪ ನಾಟಕದಲ್ಲಿ ಗ್ರಾಮೀಣ ಪ್ರದೇಶದತ್ತ ತಮ್ಮ ದೃಷ್ಟಿಯನ್ನು ಹರಿಬಿಟ್ಟು, ನಿಖರವಾದ ಹೋರಾಟದ ಸತ್ಯ ಸಂವೇದನೆಯೊಂದಿಗೆ ಈ ನಾಟಕ ರಚನೆ ಮಾಡಿರುವುದು ನೂತನವಾದ ಮೌಲ್ಯಕ್ಕೆ ಪ್ರಾಮುಖ್ಯತೆ ನೀಡಿ, ಆಡುವ ಮಾತಿನ ಮರ್ಮವನ್ನು ತಿಳಿದು ವಿಡಂಬನೆಯತ್ತ ಹೊಸ ಹೊದಿಕೆ ಹೊದಿಸಿ, ಸಮಕಾಲಿನ ಅನುಭವವನ್ನು ನೀಡಿದ್ದಾರೆ.

**ಶ್ರೀ ವನಪಾಲ ದೇಶಪಾಂಡೆ**
ಶಾಸನ ಪತ್ರಿಕೆ ಗುಲಬರ್ಗಾ
೧-೧-೧೯೭೮

ಕನ್ನಡದಲ್ಲಿ ಈಚಿನ ವರ್ಷಗಳಲ್ಲಿ ಅಸಂಗತ, ಪ್ರಾಯೋಗಿಕ ಇತ್ಯಾದಿ ವೇಷತೊಟ್ಟು ಬಂದ ಹಲವು ನಾಟ್ಯ ಪ್ರತಿರೂಪಗಳಲ್ಲಿ ಇದು ಒಂದು. ಇಲ್ಲಿ 'ವ್ಯಕ್ತಿ'-ಕ-ಕಾ-ಕಿ ಎಂಬ ನಾಲ್ಕು ಪಾತ್ರಗಳ ಮೂಲಕ ಆಧುನಿಕ, ಸಾಮಾಜಿಕ ಜೀವನದ ಗೊಂದಲಮಯ ಪರಿಸರವನ್ನು ಚಿತ್ರಿಸುವ ಪ್ರಯತ್ನವಿದೆ. ಲೇಖಕರು ಅಲ್ಲಲ್ಲಿ ತಮ್ಮ ಗ್ರಾಮೀಣ ಪರಿಸರದ ಪದಗಳನ್ನು ಗಾದೆಗಳನ್ನು ಬಳಸಿದಾಗ ಮಾತ್ರ ಸ್ವಲ್ಪ ಖುಷಿಯಾಗುತ್ತದೆ.

ಡಾ. ಸಿದ್ದಲಿಂಗಯ್ಯ ಪಟ್ಟಣಶೆಟ್ಟಿ
ಖ್ಯಾಸ ಸಾಹಿತಿ ಧಾರವಾಡ

## ರೆಕ್ಕೆ ಮೂಡಿದಾಗ ಮತ್ತು ಬೆಳ್ಳಿ ನಾಟಕಗಳ ಕುರಿತು ವಿಮರ್ಶಕರ ಅಭಿಪ್ರಾಯ

ಡಾ. ಬಸವರಾಜ ಸಬರದರ ರೆಕ್ಕೆ ಮೂಡಿದಾಗ ಎಂಬ ನಾಟಕ ಪ್ರಗತಿಶೀಲ ಧೋರಣೆಗೆ ಅಂಟಿಕೊಂಡ ನಾಟಕಗಳನ್ನು ವಿಕ್ಷಿಸಿದ ಪ್ರೇಕ್ಷಕರಿಗೆ ಖಂಡಿತ ಚಿಂತನೆಗೆ ತೊಡಗಿಸುವುದರಲ್ಲಿ ಯಾವ ಸಂದೇಹ ಇಲ್ಲ. ಇಲ್ಲಿಯ ನಾಟಕಕಾರರು ಬರೇ ರಂಜನೆಯನ್ನಷ್ಟೇ ಮುಖ್ಯವಾಗಿಟ್ಟುಕೊಳ್ಳದೇ ಪ್ರಸ್ತುತ ಸಮಾಜದ ಶೋಷಣೆಯ ಕೇಂದ್ರವನ್ನೇ ಹೊಸ ತಂತ್ರದ ಮುಖಾಂತರ ಪ್ರೇಕ್ಷಕರಿಗೆ ಪರಿಣಾಮಕಾರಿಯಾಗಿರುವಂತೆ ಬಿತ್ತರಿಸಿದ್ದಾರೆ. ಇನ್ನೊಂದು ವಿಶೇಷ ಎಂದರೆ ಸೂತ್ರ ಧಾರನ ಮುಖಾಂತರ ಪ್ರೇಕ್ಷಕರಿಗೂ, ನಾಟಕಕ್ಕೂ ನಿಕಟ ಸಂಪರ್ಕ ಹೊಂದಿಸಿ, ರಂಜಿಸುವಲ್ಲಿ ಶ್ರೀ ಸಾಮಾನ್ಯ ಆಡು ನುಡಿಯನ್ನೇ ಬಳಸಿಕೊಂಡು, ಪ್ರೇಕ್ಷಕರಿಗೆ ಎಲ್ಲಿಯೂ ಬೋರಾಗದಂತೆ ಕಾಪಾಡಿಕೊಂಡು, ಬಂದಿರುವ ತಂತ್ರ ಈ ನಿಟ್ಟಿನಲ್ಲಿ ಡಾ. ಬಸವರಾಜ ಸಬರದರು ಹೊಸ ಭರವಸೆಯನ್ನು ಮೂಡಿಸಬಲ್ಲ, ಅರ್ಥಪೂರ್ಣ ನಾಟಕಕಾರರು ಎಂಬುವುದರಲ್ಲಿ ಸಂದೇಹ ಇಲ್ಲ.

ಸುರೇಂದ್ರಕುಮಾರ ಬಿ.ಕೆ.
ಕಮಲಾಪುರ

ಡಾ. ಬಸವರಾಜ ಸಬರದರು ಕನ್ನಡ ಸಾಹಿತ್ಯ ಲೋಕದಲ್ಲಿ ಈಗಾಗಲೇ ಸಾಕಷ್ಟು ಹೆಸರು ಗಳಿಸಿದ್ದಾರೆ. ಈಗ ಈ ಎರಡು ನಾಟಕಗಳನ್ನು ನೀಡಿ, ಅವರು ತಮ್ಮ ಜನಪ್ರೀಯತೆಯನ್ನು ಹೆಚ್ಚಿಸಿಕೊಂಡಿದ್ದಾರೆಂದು ಹೇಳಬೇಕು. ಎರಡು ಸಾಮಾಜಿಕ ಸಮಸ್ಯೆಗಳನ್ನು ಎತ್ತಿಕೊಂಡು, ಪರಿಹಾರಕ್ಕಾಗಿ ಪ್ರಯತ್ನಿಸುವ ನಾಟಕಗಳೇ ಇವು ಆಗಿವೆ. (೧. ರೆಕ್ಕೆ ಮೂಡಿದಾಗ, ೨. ಬೆಳ್ಳಿ) ಈ ಎರಡು ಒಳ್ಳೆಯ ನಾಟಕಗಳನ್ನು ನೀಡಿರುವ ಡಾ. ಬಸವರಾಜ ಸಬರದರಿಗೆ ಅಭಿನಂದನೆಗಳು.

ದ.ಲ. ಕೆರೂರ
ಸಂಯುಕ್ತ ಕರ್ನಾಟಕ ೪-೧೦-೧೯೮೨

ಈ ಎರಡು ಹೆಣ್ಣಿನ ಲೈಂಗಿಕ ಶೋಷಣೆ ವಿರುದ್ಧ ಬರೆಯಲ್ಪಟ್ಟ ಬಂಡಾಯ ನಾಟಕಗಳು. 'ಬೆಳ್ಳಿ'ಯಲ್ಲಿ ಬಸವಿ ಬಿಡುವ ಧಾರ್ಮಿಕ ಪದ್ಧತಿಯ ಹೆಸರಿನಲ್ಲಿ ನಡೆಯುವ ಶೋಷಣೆ, ವಿದ್ಯೆಯ ಮೂಲಕ ಬರುವ ಅರಿವೆ, ಪರಿಹಾರವೆಂದು ಸೂಚಿತವಾಗಿದ್ದರೆ 'ರೆಕ್ಕೆ ಮೂಡಿದಾಗ'ದಲ್ಲಿ ರಾಜಕೀಯ ಅದಿಕಾರದಾಟದಲ್ಲಿ ಲೈಂಗಿಕವಾಗಿ ನಲುಗುವ ಹೆಣ್ಣಿಗೆ ಸಾಹಿತ್ಯ ಪಾಠದ ಮೂಲಕ ಬಿಡುಗಡೆಯ ಹಾದಿ ಸೂಚಿಸಲಾಗಿದೆ. ನಾಟಕವಾಗಿ ಮೊದಲನೆಯದು ಅತೀ ಸರಳ ಎನಿಸಿದರೆ ಎರಡನೆಯದು ಅತಿರೇಖ ಎನಿಸುತ್ತದೆ. ಈ ಎರಡೂ ವಸ್ತುವಿನ ಸರಳೀಕರಣದ ಪರಿಣಾಮಗಳೇ. ಹೈದ್ರಾಬಾದ ಕರ್ನಾಟಕದ ಜನಪದ ಭಾಷೆಯನ್ನು ವಿಶೇಷವಾಗಿ ಹಾಡುಗಳಲ್ಲಿ ಬಹು ಸುಲಲಿತ ಶೈಲಿಯಲ್ಲಿ ಬಳಸಲಾಗಿದ್ದು, ಅದು ನಾಟಕಗಳಿಗೆ ಒಂದು ಹಂತದ ಆಕರ್ಷಣೆಯತೆಯನ್ನು ಮಾತ್ರ ಒದಗಿಸಿದೆ. ಹೀಗಾಗಿ ಬಂಡಾಯ ಒಟ್ಟಾರೆ ಇಲ್ಲಿ ಲಘು ಮನೋರಂಜನಗಷ್ಟೇ ಮೀಸಲಾದಂತಿದೆ.

ಶ್ರೀ ಜಿ.ಪಿ. ಬಸವರಾಜು
ಸಂವಾದ ಜುಲೈ ೧೯೯೨

## "ನರಬಲಿ" ನಾಟಕ ಕುರಿತು ವಿಮರ್ಶಕರ ಅಭಿಪ್ರಾಯ

ನಾಸ್ತಿಕತೆಯ ಬಗೆಗೆ ಪುರೋಹಿತ ಶಾಹಿಯ ಶೋಷಣೆಯ ಬಗೆಗೆ ಈಗಾಗಲೇ ಕನ್ನಡದಲ್ಲಿ ಸಾಕಷ್ಟು ಗ್ರಂಥಗಳು ರಚನೆಯಾಗಿವೆ. ಈ ಗುಂಪಿಗೆ ನರಬಲಿ ನಾಟಕವು ಸೇರುತ್ತದೆ. ಪೌರಾಣಿಕ ವಸ್ತುವನ್ನು ದೊಡ್ಡಾಟದ ಜಾನಪದ ಶೈಲಿಯಲ್ಲಿ ರೂಪಿಸಿರುವುದು ಈ ನಾಟಕದ ವಿಶೇಷವಾಗಿದೆ. ಪ್ರಾರಂಭದ ಸಾರತಿ ಹಾಗೂ ದೂತಿಯ ಸಂಭಾಷಣೆಯಲ್ಲಿ ನಾಟಕಕಾರರು ವೈಚಾರಿಕ ತೀವ್ರತೆಯನ್ನು ನಿಚ್ಚಳವಾಗಿ ಕಾಣಬಹುದು.

ಡಿ. ಲಿಂಗಯ್ಯ

ಬಸವರಾಜ ಸಬರದರ ನರಬಲಿಯ ಕೇಂದ್ರದಲ್ಲಿರುವುದು ಜೀವ ವಿರೋಧಿ, ಸಾಂಪ್ರದಾಯಿಕ, ಮೌಲ್ಯಗಳು ಮತ್ತು ಜೀವಪರವಾದ ಬಂಡಾಯದ ಮೌಲ್ಯಗಳ ಸಂಘರ್ಷ. ನಾಟಕದ ಪ್ರಾರಂಭದಲ್ಲೇ 'ದೂತಿ' ಹೇಳುವ ಹಾಗೆ 'ನಾಸ್ತಿಕನಾದ ವೇನ ರಾಜ ಒಂದು ಕಡೆ, ಆರ್ಯ ಋಷಿ, ಗೌತಮ, ಮತ್ತೊಂದು ಕಡೆ' ಒಂದು ಪೂರ್ವವಾದರೆ ಮತ್ತೊಂದು ಪಶ್ಚಿಮ ಈ ಪೂರ್ವ ಪಶ್ಚಿಮಗಳ ಸಂಘರ್ಷ ಕೊನೆಗೊಳ್ಳುವುದು ವೇನ ರಾಜನ ಸಾವಿನಲ್ಲಿ. ಈ ಹಿನ್ನಲೆಯಲ್ಲಿ ನೋಡಿದಾಗ 'ನರಬಲಿ ಕೊನೆಗೆ ಸಹಜವಾಗಿ ತಾಯಿಯ ರೂಪದಲ್ಲಿ ಕೊನೆಗೊಳ್ಳುತ್ತದೆ'

ಎಂ.ಕೆ. ಅನೀಲ
ಕನ್ನಡ ವಾರ್ಷಿಕ ಕನ್ನಡ ವಿಶ್ವವಿದ್ಯಾಲಯ
ಹಂಪಿ ೧೯೯೨

**ಡಾ. ಬಸವರಾಜ ಸಬರದರ "ಬೆಳ್ಳಕ್ಕಿ ಸಾಲು" ನಾಟಕ ಕುರಿತು ವಿಮರ್ಶಕರ ಅಭಿಪ್ರಾಯ**

ಬಸವರಾಜ ಸಬರದರ ಗೀತ ನಾಟಕ, 'ಬೆಳ್ಳಕ್ಕಿ ಸಾಲು', ಕಳೆದ ವರ್ಷದ 'ನರಬಲಿ'ಗಿಂತ ಭಿನ್ನವಾಗಿದೆ. ನಾಟಕವು ಕಾವ್ಯಾತ್ಮಕವಾಗಿದೆ. ಪ್ರೀತಿಯೇ ನಾಟಕದ ವಸ್ತು. ರಾಜಕುಮಾರಿ ಮತ್ತು ಕವಿ ಇವರಿಬ್ಬರು ಪ್ರೀತಿಯ ಹುಡುಕುತ್ತಾ, ಅಲಿಯುತ್ತಾ ಈ ಅಲೆದಾಟದಲ್ಲಿ ಎರಡೂ ಭೂಮಿಕೆಗಳು ಸೃಷ್ಟಿಗೊಳ್ಳುತ್ತವೆ. ಇಡೀ ನಾಟಕ ಕನಸುಗಳನ್ನು ಹೆಣೆಯುತ್ತಾ ಹೋಗುತ್ತದೆ.

**ಮಲ್ಲೇಪೂರಂ ಜಿ. ವೆಂಕಟೇಶ**
ಕನ್ನಡ ವಿಶ್ವವಿದ್ಯಾಲಯ ಹಂಪಿ

ಕಾವ್ಯ ಹಾಗೂ ನಾಟಕಗಳ ರಚನೆಯಲ್ಲಿ ಹೆಸರು ಮಾಡಿದ ಬಸವರಾಜ ಸಬರದರವರ 'ಬೆಳ್ಳಕ್ಕಿ ಸಾಲು' ಕ್ರಾಂತಿಕಾರಿ ವಸ್ತುವನ್ನು ನೌರಾಗಿ ನಿರೂಪಿಸುವ ಒಂದು ಗೀತ ನಾಟಕ. ಕವಿ ಹಾಗೂ ಪ್ರಕೃತಿಯ ಅವಿನಾ ಸಂಬಂಧವನ್ನು ಚಿತ್ರಿಸಿರುವುದು ಕೃತಿಯ ಒಂದು ವಿಶೇಷ. ರಂಗಭೂಮಿಗಿಂತಲೂ ಬಾನುಲಿ ಪ್ರಸಾರಕ್ಕೆ ಈ ನಾಟಕ ಹೆಚ್ಚು ಯೋಗ್ಯವಿದ್ದಿತ್ತು.

ವೈಚಾರಿಕ ಸಾಹಿತ್ಯ ಸಂಘರ್ಷ

ಕನ್ನಡದಲ್ಲಿ ಪ್ರಥಮವಾಗಿ ಗೀತ ನಾಟಕ ರಚಿಸಿದ ಯಶಸ್ಸು ಶಿವರಾಮ ಕಾರಂತರದ್ದಾದರೂ ಪು.ತಿ.ನ. ಅವರ 'ಅಹಲ್ಯ' ಜನಮನಗೆದ್ದ ಗೀತ ನಾಟಕ. ಅನಂತರ ಬಂದ ನವೋದಯ ಸಾಹಿತಿಗಳು ಬರೆದ ಗೀತ ನಾಟಕವು ಅಲ್ಲೊಂದು ಇಲ್ಲೊಂದು ಪ್ರಕಟವಾಗಿವೆ. ಸಬರದರವರ 'ಬೆಳ್ಳಕ್ಕಿ ಸಾಲು' ನಿಜಕ್ಕೂ ಯಶಸ್ವಿಯಾಗಿದೆ ಎಂದರೆ ತಪ್ಪಾಗಲಾರದು.

**ತುರುವನೂರು ಮಂಜುನಾಥ**

ತಮ್ಮ ಸೃಜನಶೀಲತೆಯ ಸಾಧ್ಯತೆಗಳನ್ನು ಸದವರೆಗೆ ಹಚ್ಚಿ ನೋಡುವ ಸ್ವಭಾವದ ಡಾ. ಬಸವರಾಜ ಸಬರದರಿಗೆ ನಾಟಕ ರಚನೆ ಹೊಸದಲ್ಲ. ಇದುವರೆಗೆ ಒಂದು ಡಜನ್ ನಾಟಕ ಬರೆದಿದ್ದಾರೆ. ಅಸಂಗತ ಬೀದಿನಾಟಕ ಪ್ರಕಾರಗಳು ಸಬರದರಿಗೆ ಪ್ರೀಯೆ. ಪ್ರಸ್ತುತ ಬೆಳ್ಳಕ್ಕಿ ಸಾಲು ಗುಲಬರ್ಗಾ ವಿಶ್ವವಿದ್ಯಾಲಯದ ಪಠ್ಯ ಕೃತಿಯಾಗಿದೆ. ಸಹಜವಾಗಿಯೇ ಎರಡನೆ ಮುದ್ರಣವನ್ನು ಕಂಡಿದೆ. ಇದು ಗೌರವದ ವಿಷಯ. ನಾಟಕಗಳ ಜಾಗವನ್ನು ಟಿ.ವಿ. ಧಾರವಾಹಿಗಳು ಅಕ್ರಮಿಸಿದ ಈ ಕಾಲದಲ್ಲಿ ನಾಟಕ ರಚನೆಯ ಬಗೆಗೂ ಅಷ್ಟಾಗಿ ಉತ್ಸಾಹವಿಲ್ಲ. ಹೀಗಿದ್ದಾಗೂ ಈ ಗೀತ ನಾಟಕ ಜಾನಪದ ಮೆರುಗಿನಿಂದ ಕೂಡಿ ನಿಜವಾದ 'ಉತ್ಸವ'ವಾಗಿದೆ.

ಕಮಲಾ ಹೆಮ್ಮಿಗೆ

ವಿಜಯ ಕರ್ನಾಟಕ ೧೧-೩-೨೦೦೧

**ಡಾ. ಬಸವರಾಜ ಸಬರದರ ಮೂರು ಬೀದಿ ನಾಟಕಗಳ ಕುರಿತು ವಿಮರ್ಶಕರ ಅಭಿಪ್ರಾಯ**

ಬೀದಿ ನಾಟಕಗಳು ಬಂಡಾಯ ಸಂದರ್ಭದಲ್ಲಿ ಬಂದಂತಹ ವಿಶಿಷ್ಟ ನಾಟಕಗಳಾಗಿದ್ದು, ಸಮಸ್ಯೆಗಳನ್ನು ಮುಖ್ಯವಾಗಿ ಕೈಗೆತ್ತಿಕೊಳ್ಳುವ ಇವು ಜನರ ಮಧ್ಯೆಯೇ ಹುಟ್ಟಿ, ಜನರ ಮಧ್ಯೆಯೇ ಬೆಳೆಯುತ್ತಾ ಹೋಗುತ್ತವೆ. ಸಬರದರ ಈ ಮೂರು ಬೀದಿ ನಾಟಕಗಳು ರಾಜಕೀಯ, ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳನ್ನು ಕಾಡುತ್ತಿರುವ ಅನಕ್ಷರತೆ, ಮುಗ್ದತೆ, ಮೌಢ್ಯತೆ ಮತ್ತು ಸ್ವಾರ್ಥಗಳ ವಿರುದ್ಧ ಧ್ವನಿ ಎತ್ತುವ ಕಾರ್ಯ ಮಾಡುತ್ತವೆ.

**ಡಾ. ಎನ್.ಕೆ. ಜೋಷಿ**
**ಸುದ್ದಿಮೂಲ ರಾಯಚೂರು**
**೩-೯-೧೯೯೪**

ಜಾನಪದೆಯ ಹಾಡುಗಳನ್ನು ಬಳಸಿಕೊಂಡು, ಪ್ರಸ್ತುತ ಸಮಾಜದ ವ್ಯವಸ್ಥೆಯಲ್ಲಿಯ ಒರೆ ಕೋರೆಗಳನ್ನು ಎತ್ತಿ ತೋರಿಸುವ ಮುಗ್ಧ ಹಳ್ಳಿಗನ ಮೇಲೆ ನಾಗರಿಕತೆಯ ದಬ್ಬಾಳಿಕೆ, ಪ್ರಜಾಪ್ರಭುತ್ವದ ಹೆಸರಿನಲ್ಲಿ ನಡೆಯುವ ರಾಜಕೀಯ ಭ್ರಷ್ಟತೆ, ಮೂಢನಂಬಿಕೆಗೆ ಬಲಿಯಾದ ಹಳ್ಳಿಯ ಮುಗ್ದರ ಕರುಣಾಜನಕ ಸ್ಥಿತಿಯನ್ನು ಈ ಮೂರು ನಾಟಕಗಳು ಎತ್ತಿ ತೋರಿಸುತ್ತವೆ. ಮತ್ತೆ ಈ ಸಮಸ್ಯೆಗಳಿಗೆ ಮುಖ್ಯವಾದ ಕಾರಣವೇನು. ಅವುಗಳಿಗೆ ಪರಿಣಾಮಗಳು ಹೇಗೆ ಕಂಡುಕೊಳ್ಳಬೇಕೆನ್ನುವುದನ್ನು ಜನಸಾಮಾನ್ಯರಿಗೆ ತಿಳಿಸುವಲ್ಲಿ ನಾಟಕ ಹೆಚ್ಚು ಸಫಲವಾಗಬಲ್ಲವು.

ಅಶೋಕ ಕುಮಾರ ರಂಜೇರೆ

ಪುಸ್ತಕ ಮಾಹಿತಿ ಜೂನ್ ೧೯೯೫

~~ಅನುಬಂಧ~~

**ಡಾ. ಬಸವರಾಜ ಸಬರದರ ನಾಲ್ಕು ನಾಟಕಗಳನ್ನು ಕುರಿತು ವಿಮರ್ಶಕರ ಅಭಿಪ್ರಾಯಗಳು**

ಡಾ. ಬಸವರಾಜ ಸಬರದರ ನಾಲ್ಕು ಬೀದಿ ನಾಟಕಗಳ ಕುರಿತು ಅವರು ಎಂತಹ ಪ್ರತಿಕೂಲ ಪರಿಸ್ಥಿತಿಗಳನ್ನು ಎದುರಿಸಿ, ಸಹಿಸಿ ತಮ್ಮ ಸಾಹಿತ್ಯಿಕ ಜಿಗುಟುತನವನ್ನು ಉಳಿಸಿಕೊಂಡು ಚಿಗುರುತ್ತಿರುವ ಲೇಖಕರು, ಕವಿ, ನಾಟಕಕಾರ, ವಿಮರ್ಶಕ, ಸಂಪಾದಕ ಮುಂತಾದ ಟಿಸಿಲುಗಳನ್ನು ಬೆಳೆಸಿಕೊಂಡು, ಹಬ್ಬುತ್ತಿರುವ ಮರದಂತೆ ಬೆಳೆಯುವ ಸಾಹಿತಿ. ಈಗಾಗಲೇ ವಿದ್ವಾಂಸರ ಗಮನ ಸೆಳೆದು ಸಾಕಷ್ಟು ಕೃತಿಗಳ ರಚನೆ ಮಾಡಿದ್ದಾರೆ.

**ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ**

ಖ್ಯಾತ ಸಾಹಿತಿ

ಧಾರವಾಡ

## ಡಾ. ಬಸವರಾಜ ಸಬರದರ ನಾಲ್ಕು ಬೀದಿ ನಾಟಕಗಳ ಕುರಿತು ವಿಮರ್ಶಕರ ಅಭಿಪ್ರಾಯ

ಡಾ. ಬಸವರಾಜ ಸಬರದರ ಈ ಹಿಂದೆ ಒಂದು ಬೀದಿ ನಾಟಕಗಳ ಸಂಕಲನವನ್ನು ಪ್ರಕಟಿಸಿದ್ದರು. ಇದು ಅವರ ಎರಡನೆ ಬೀದಿ ನಾಟಕಗಳ ಸಂಕಲನ. ಈ ಪುಸ್ತಕದಲ್ಲಿ ನಾಲ್ಕು ಬೀದಿ ನಾಟಕಗಳಿವೆ. ಸಾಕ್ಷರತೆ, ಸ್ತ್ರೀ ವಿಮೋಚನೆ, ರೈತರ ದುರುಸ್ಥಿತಿ ಈ ನಾಟಕದ ವಸ್ತುವಾಗಿದೆ. ಈ ನಾಲ್ಕೂ ನಾಟಕಗಳಲ್ಲಿ ಪ್ರೇಕ್ಷಕರನ್ನು ರಂಜಿಸುವ ವಿಡಂಬನಾತ್ಮಕ ಗುಣವೂ ಇದ್ದು, ಪ್ರೇಕ್ಷಕರನ್ನು ಚಿಂತೆಗೆ ಹಚ್ಚಬಲ್ಲಂತ ವೈಚಾರಿಗಳೂ ಇದೆ. ಪ್ರಸಕ್ತ ಸಾಮಾಜಿಕ, ರಾಜಕೀಯ, ಶೈಕ್ಷಣಿಕ, ಭಾಷಿಕ, ಔದ್ಯೋಗಿಕ ಬಿಕ್ಕಟ್ಟುಗಳನ್ನು ಈ ನಾಟಕಗಳು ಬಗೆದು ನೋಡುತ್ತವೆ.

**ಎಸ್. ಮಾಲತಿ**

**ಪ್ರಜಾವಾಣಿ ೧೩-೧-೨೦೦೨**

ಇಲ್ಲಿಯ ನಾಲ್ಕೂ ನಾಟಕಗಳು ಪ್ರಯೋಗಕ್ಕೆ ಅನುಕೂಲವಾಗಿವೆ. ಲವಲವಿಕೆಯಿಂದ ಕೂಡಿದ ಸಂಭಾಷಣೆ ಇದೆ. ಹಾಗೆಯೇ ನಾಟಕದ ವಸ್ತು ವಿವರವನ್ನು ಪರಿಣಾಮಕಾರಿಯಾಗಿ ಸಾರುವ ಹಾಡುಗಳಿವೆ. ಈ ಎಲ್ಲಾ ನಾಟಕಗಳನ್ನು ರಂಗ ನಾಟಕವನ್ನಾಗಿ ಪರಿವರ್ತಿಸಿಕೊಳ್ಳಲು ಸಹ ಸಾಧ್ಯವಿದೆ. ಮತ್ತು ಅರ್ಧತಾಸು ಅವಧಿಯಲ್ಲಿಯೇ ಮುಗಿಯುವಂತದ್ದು. ಈ ಎಲ್ಲಾ ಕಾರಣಗಳಿಂದ ಬೀದಿ ನಾಟಕದ ಕ್ಷೇತ್ರಕ್ಕೆ ಈ ಸಂಕಲನವು ಉತ್ತಮ ಸೇರ್ಪಡೆಯಾಗಿದೆ.

**ಆರ್.ವಿ. ಭಂಡಾರಿ**

ಸಕಾಲಿಕ ೧೭-೪-೨೦೦೩

## ಡಾ. ಬಸವರಾಜ ಸಬರದರ ಐದು ಬೀದಿ ನಾಟಕಗಳ ಕುರಿತು ವಿಮರ್ಶಕರ ಅಭಿಪ್ರಾಯ

ಸಾಹಿತ್ಯದ ಎಲ್ಲಾ ಪ್ರಕಾರಗಳನ್ನು ಕೈ ಆಡಿಸಿರುವ ಬಸವರಾಜ ಸಬರದರ ಐದು ಬೀದಿ ನಾಟಕಗಳ ಸಂಕಲನ ಇದು. ಸಬರದರು ಈಗಾಗಲೇ ಬೀದಿ ನಾಟಕಗಳ ಎರಡು ಕೃತಿಗಳನ್ನು ಪ್ರಕಟಿಸಿದ್ದಾರೆ. ಇದು ಅವರ ಬೀದಿ ನಾಟಕದ ಮೂರನೆ ಕೃತಿ. ಬೀದಿಯಲ್ಲಿ ನಿಂತ ಪ್ರೇಕ್ಷಕನ ಕಲ್ಪನಾ ಶಕ್ತಿಯನ್ನು ಎಷ್ಟು ಪ್ರಮಾಣದಲ್ಲಿ ದುಡಿಸಿಕೊಳ್ಳಲು ನಿರ್ದೇಶಕ ಶಕ್ತನು ಅಷ್ಟು ಯಶಸ್ವಿಯಾಗಬಲ್ಲ. ನಾಟಕಗಳು ಇಲ್ಲಿವೆ. ವಾಸ್ತವಾದಿ ರಂಗವನ್ನು ಕಟ್ಟಿಕೊಡಬಲ್ಲ, ಸಮರ್ಥ ನಿರ್ದೇಶಕನಿಗೆ ರಂಗದ ಮೇಲೆ ಸವಾಲಾಗಬಲ್ಲಂತ ನಾಟಕಗಳು ಇಲ್ಲಿವೆ. ಸಬರದರು ರಂಗ ಪ್ರಯೋಗದ ಬಗೆಗೂ ತಿಳಿದಿದ್ದವರಾದರಿಂದ ಈ ಸಮನ್ವಯ ಸಾಧ್ಯವಾಗಿದೆ.

**ಪಲ್ಲವಿ ಪ್ರಕಾಶನ**
ಗುಲಬರ್ಗಾ.

## ಡಾ. ಬಸವರಾಜ ಸಬರದ

(ವ್ಯಕ್ತಿ ಪರಿಚಯ)

೧. ಪೂರ್ಣ ಹೆಸರು : ಡಾ. ಬಸವರಾಜ ಸಬರದ

೧೨. ತಾಯಿ–ತಂದೆ ಹೆಸರು : ಶ್ರೀಮತಿ ಬಸಮ್ಮ ಹಾಗೂ ಶ್ರೀ ಬಸಪ್ಪ

೩. ಜನನ : ೨೦–೦೬–೧೯೫೪

೪. ಹುಟ್ಟೂರು : ಕುಕನೂರು (ಕೊಪ್ಪಳ ಜಿಲ್ಲೆ)

೫. ಶಿಕ್ಷಣಃ

೧. ಎಸ್.ಎಸ್.ಎಲ್.ಸಿ. : ಶ್ರೀ ಗವಿಸಿದ್ದೇಶ್ವರ ಹೈಸ್ಕೂಲ್ ಕುಕನೂರು.
ಪ್ರಥಮ ವರ್ಗದಲ್ಲಿ ತೇರ್ಗಡೆ ೧೯೬೯.

೨. ಪಿಯುಸಿ : ಶ್ರೀ ಗವಿಸಿದ್ದೇಶ್ವರ ಕಾಲೇಜು ಕುಕನೂರು.

೩. ಬಿ.ಎ. : ಜೆ.ಟಿ. ಕಾಲೇಜು ಗದಗ, ಪ್ರಥಮ ವರ್ಗ ೧೯೭೩.

೪. ಎಂ.ಎ. ಕನ್ನಡ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಪ್ರಥಮ ವರ್ಗ ೧೯೭೫.

೫. ಡಿಪ್ಲೋಮಾ ಎಪಿಗ್ರಾಫಿ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೫.

೬. ಪಿ.ಎಚ್.ಡಿ : ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ೧೯೮೨.

೬. ಈಗಿನ ಹುದ್ದೆ–ವಿಳಾಸ : ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು
ಕನ್ನಡ ಅಧ್ಯಯನ ಸಂಸ್ಥೆ, ಡೀನ್‌ರು ಕಲಾನಿಕಾಯ
ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.
ಮೊಃ ೯೮೮೬೬೧೯೨೨೦.

೭. ಶೈಕ್ಷಣಿಕ ಸೇವೆ

ಃ೧. ಆರ್ಟ್ಸ್ ಕಾಲೇಜು ರಾಯಬಾಗ್, ಎಸ್.ಕೆ. ಕಾಲೇಜು, ತಾಳಿಕೋಟೆ,
ಕರ್ನಾಟಕ ಕಾಲೇಜು, ಬೀದರಗಳಲ್ಲಿ ಕನ್ನಡ ಉಪನ್ಯಾಸಕರಾಗಿ, ಅಮರೇಶ್ವರ ಕಾಲೇಜು ಔರಾದದಲ್ಲಿ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿ ೧೯೮೭ ರಿಂದ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಣೆ ಒಟ್ಟು ೩೦ ವರ್ಷ ಕಲಿಸಿದ ಅನುಭವ.

ಃ೨. ಗುಲಬರ್ಗಾ ವಿಶ್ವವಿದ್ಯಾಲಯದ ಶೈಕ್ಷಣಿಕ ಮಂಡಳಿ ಸದಸ್ಯರು.

ಃ೩. ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಳಿಗಳ ಅಧ್ಯಕ್ಷರು.

ಃ೪. ಗುಲಬರ್ಗಾ ವಿಶ್ವವಿದ್ಯಾಲಯದ ಕಲಾ ನಿಕಾಯದ ಡಿನ್‌ರು.

ಃ೫. ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಕೌನ್ಸಿಲ್ ಅಧ್ಯಕ್ಷರು.

ಃ೬. ಗುಲಬರ್ಗಾ ವಿಶ್ವವಿದ್ಯಾಲಯದ 'ಕಲಾ ಗಂಗಾ' ಪತ್ರಿಕೆಯ ಸಂಪಾದಕರು.

ಃ೭. ಗುಲಬರ್ಗಾ ವಿಶ್ವವಿದ್ಯಾಲಯ ಹಾಗೂ ಕರ್ನಾಟಕ ರಾಜ್ಯದ ಇತರೆ ವಿಶ್ವವಿದ್ಯಾಲಯಗಳಲ್ಲಿ ಪರೀಕ್ಷಾ ಮಂಡಳಿಗಳ ಚೇರ್‌ಮನ್‌ರಾಗಿ/ ಮೌಲ್ಯಮಾಪಕರಾಗಿ / ಸ್ಕ್ವಾಡ್ ಚೇರ್‌ಮೆನ್‌ರಾಗಿ ಕಾರ್ಯನಿರ್ವಹಣೆ.

ಃ೮. ಗುಲಬರ್ಗಾ ವಿಶ್ವವಿದ್ಯಾಲಯದ ಪರೀಕ್ಷಾ ಮಂಡಳಿಗಳ ಚೇರ್‌ಮನ್‌ರು.

ಃ೯. ಗುಲಬರ್ಗಾ ವಿಶ್ವವಿದ್ಯಾಲಯದ ಅಫಿಲಿಯೇಷನ್ ಕಮಿಟಿ ಚೇರ್‌ಮನ್‌ರಾಗಿ / ಸದಸ್ಯರಾಗಿ ಕಾರ್ಯನಿರ್ವಹಿಸಿದ್ದಾರೆ.

ಃ೧೦. ರಾಜ್ಯಮಟ್ಟದ ಹಾಗೂ ರಾಷ್ಟ್ರಮಟ್ಟದ ಶೈಕ್ಷಣಿಕ ಸಮ್ಮೇಳನಗಳಲ್ಲಿ ಭಾಗವಹಿಸಿ ಪ್ರಬಂಧ ಮಂಡಿಸಿದ್ದಾರೆ.

ಃ೧೧. ವಿವಿಧ ವಿಶ್ವವಿದ್ಯಾಲಯಗಳ ಶೈಕ್ಷಣಿಕ ಪುನಶ್ಚೇತನ ಶಿಬಿರಗಳಲ್ಲಿ (ರೆಫ್ರೆಶರ್ ಕೋರ್ಸ್‌ಗಳಲ್ಲಿ) ವಿಶೇಷ ಉಪನ್ಯಾಸಕರಾಗಿ ಭಾಗವಹಿಸಿ ಮೌಲಿಕ ಉಪನ್ಯಾಸಗಳನ್ನು ನೀಡಿದ್ದಾರೆ.

ಃ೧೨. ಇವರ ಪಿ.ಎಚ್.ಡಿ. ಮಾರ್ಗದರ್ಶನದಲ್ಲಿ ಈಗಾಗಲೇ ೨೦ ಎಂ.ಫಿಲ್. ಪದವಿಗಳು, ೧೦ ಪಿ.ಎಚ್.ಡಿ. ಪದವಿಗಳು ಅವಾರ್ಡ್ ಆಗಿವೆ.

**೮. ಆಡಳಿತಾತ್ಮಕ ಸೇವೆ:**

೧. ಪ್ರಾಚಾರ್ಯರಾಗಿ : ಶ್ರೀ ಅಮರೇಶ್ವರ ಪದವಿ ಮಹಾವಿದ್ಯಾಲಯ, ಔರಾದ ಜಿಲ್ಲಾ ಬೀದರ ಇಲ್ಲಿ ಎರಡು ವರ್ಷ ಸಂಸ್ಥಾಪಕ (೧೯೮೧ ರಿಂದ ೧೯೮೩ ರ ವರೆಗೆ) ಪ್ರಾಚಾರ್ಯರಾಗಿ ಸೇವೆ ಸಲ್ಲಿಸಲಾಗಿದೆ.

೨. ಸ್ಥಳೀಯ ಮುಖ್ಯಸ್ಥರಾಗಿ : ಗುಲಬರ್ಗಾ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ ಸಂಡೂರದಲ್ಲಿ ಒಂದು ವರ್ಷ (೧೯೮೯) ಕನ್ನಡ ಅಧ್ಯಯನ ಸಂಸ್ಥೆಯ ಸ್ಥಳೀಯ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಲಾಗಿದೆ.

೩. ಪ್ರಸಾರಾಂಗದ ನಿರ್ದೇಶಕರಾಗಿ: ಗುಲಬರ್ಗಾ ವಿಶ್ವವಿದ್ಯಾಲಯ ಪ್ರಸಾರಾಂಗದ ನಿರ್ದೇಶಕರಾಗಿ ಕಾರ್ಯನಿರ್ವಹಿಸಿ ೨೦೦೪-೦೫ ರ ಅವಧಿಯಲ್ಲಿ ೭೫ ಪುಸ್ತಕಗಳನ್ನು ಪ್ರಕಟಿಸಲಾಗಿದೆ.

೪. ಬಸವಾದಿ ಶರಣ ಸಾಹಿತ್ಯ : ಗುಲಬರ್ಗಾ ವಿಶ್ವವಿದ್ಯಾಲಯದ ಬಸವಾದಿ ಶರಣ ಸಾಹಿತ್ಯ ಕೇಂದ್ರದ ನಿರ್ದೇಶಕರಾಗಿ. ಕೇಂದ್ರದ ಪ್ರಾಧ್ಯಾಪಕ ನಿರ್ದೇಶಕರಾಗಿ ಎರಡು ವರ್ಷ (೨೦೦೫-೦೭) ಕಾರ್ಯನಿರ್ವಹಿಸಿದ್ದಾರೆ.

೫. ಮುಖ್ಯಸ್ಥರಾಗಿ : ಕನ್ನಡ ಅಧ್ಯಯನ ಸಂಸ್ಥೆಯ ಅಧ್ಯಕ್ಷರಾಗಿ ೨೦೦೭ ರಿಂದ ಕಾರ್ಯನಿರ್ವಹಿಸುತ್ತಿದ್ದಾರೆ.

೯. ಸಾಮಾಜಿಕ ಹೋರಾಟ :

೧. ಹೈಸ್ಕೂಲ್ ಜೀವನದಲ್ಲಿಯೇ ಅಸ್ಪೃಶ್ಯತಾ ನಿವಾರಣೆಗಾಗಿ ಹೋರಾಟ.

:೨. ಮಹಿಳೆಯರ ಅತ್ಯಾಚಾರದ ವಿರುದ್ಧ ೧೯೮೪ ರಲ್ಲಿ ಕುದುರೆ ಮೋತಿ ಹೋರಾಟ.

:೩. ಹುಲಿಗಿ ದೇವದಾಸಿ ವಿಮೋಚನಾ ಹೋರಾಟ.

:೪. ದೇವರಾಜ ಅರಸು ಸ್ಮರಣಾರ್ಥ ಶೋಷಿತ ಸಮಾವೇಶದ ಸಂಘಟನೆ.

:೫. ಅಂತರ್ಜಾತಿ ವಿವಾಹಗಳಿಗೆ ಪ್ರೋತ್ಸಾಹ.

:೬. ದಲಿತ-ಬಂಡಾಯ ಚಳುವಳಿಗಳ ರಾಜ್ಯ ಸಂಚಾಲಕರಾಗಿ ಕಾರ್ಯನಿರ್ವಹಣೆ.

:೭. ಸಮುದಾಯ ಇಷ್ಟಾದಂತಹ ಸಾಂಸ್ಕೃತಿಕ ಸಂಘಟನೆಗಳ ಸದಸ್ಯ.

:೮. ಗೋಕಾಕ ಚಳುವಳಿಯ ಮುಂಚೂಣಿಯಲ್ಲಿದ್ದು ಸೆರೆ ಮನೆವಾಸ.

:೯. ಜನಪರ ಚಳುವಳಿಗಳ ಮೂಲಕ ಬೆಳೆದದ್ದು.

೧೦. ಸಾಹಿತ್ಯಿಕ ಕೊಡುಗೆ :೧. ಪ್ರಕಟಿತ ಸ್ವತಂತ್ರ ಕೃತಿಗಳು–೪೪.

:೨. ಪ್ರಕಟಿತ ಸಂಪಾದಿತ ಕೃತಿಗಳು–೪೩.

:೩. ಪ್ರಕಟಿತ ಲೇಖನಗಳು–೨೦೦.

**೧. ಕಾವ್ಯ–೧೨ ಕವನ ಸಂಕಲನಗಳು.**

i) ಹೋರಾಟ–೧೯೭೬.
ii) ನನ್ನವರ ಹಾಡು–೧೯೭೬.
iii) ಮೂಡಲಕ ಕೆಂಪು ಮೂಡ್ಯಾವ–೧೯೮೪.
iv) ನೂರು ಹನಿಗಳು –೧೯೯೮.
v) ದನಿಯೆತ್ತಿ ಹಾಡೇನ – ೧೯೯೦.
vi) ಬೆಳದಿಂಗಳು ಬಿಸಿಲಾಯಿತು–೧೯೯೪.
vii) ಜೇನ ಹನಿಗಳು – ೧೯೯೮.
viii) ಪದಕಟ್ಟಿ ಹಾಡೇನ – ೧೯೯೯.
ix) ಸಬರದ ಕವಿತೆಗಳು – ೨೦೦೦.
x) ಕೆಂಡ ಸಂಪಿಗೆ – ೨೦೦೧.
xi) ಗುಬ್ಬಿಯೊಂದು ಗೂಡು ಕಟ್ಟ್ಯಾದೊ–೨೦೦೫.
xii) ಸೆಲೆಕ್ಟೆಡ್ ಪೋಯಮ್ಸ್–೨೦೦೫.

**೨. ನಾಟಕ–೦೮ ನಾಟಕಗಳು:**

i) ಪ್ರತಿರೂಪ–೧೯೭೭.
ii) ರೆಕ್ಕೆ ಮೂಡಿದಾಗ–೧೯೯೧.
iii) ಬೆಳ್ಳಿ – ೧೯೯೧.
iv) ನರಬಲಿ – ೧೯೯೨.
v) ಬೆಳ್ಳಕ್ಕಿ ಸಾಲು – ೧೯೯೩.
vi) ಮೂರು ಬೀದಿ ನಾಟಕಗಳು–೧೯೯೫.
vii) ನಾಕು ಬೀದಿ ನಾಟಕಗಳು – ೨೦೦೧.
viii) ಐದು ಬೀದಿ ನಾಟಕಗಳು – ೨೦೦೫.

**೩. ವಿಚಾರ ಸಾಹಿತ್ಯ – ೫ ಕೃತಿಗಳು:**

i) ಜನಪದ ದೇವತೆಗಳು–ಶಿಷ್ಟ ದೇವತೆಗಳು–೧೯೯೪.
ii) ವಿಚಾರ ಸಂಪದ – ೧೯೯೫.
iii) ಶಾಸನಗಳು, ಪ್ರಭುತ್ವ ಮತ್ತು ಜನತೆ–೧೯೯೯.
iv) ಸಮುದಾಯ ಮತ್ತು ಸಂಸ್ಕೃತಿ–೨೦೦೨.
v) ಕಣ್ಣ ಮುಂದಿನ ಕತ್ತಲು – ೨೦೦೭.

**೪. ಸಂಶೋಧನೆ-೯ ಕೃತಿಗಳು:**

i) ಬಸವೇಶ್ವರ ಮತ್ತು ಪುರಂದರದಾಸ-೧೯೯೩.
ii) ಗುಲಬರ್ಗಾ ಜಿಲ್ಲೆಯ ಅನುಭಾವಿ ಕವಿಗಳು-೧೯೯೫.
iii) ರಾಯಚೂರು ಜಿಲ್ಲೆಯ ಅನುಭಾವಿ ಕವಿಗಳು-೧೯೯೬.
iv) ಬೀದರ ಜಿಲ್ಲೆಯ ಅನುಭಾವಿ ಕವಿಗಳು-೨೦೦೧.
v) ಹೈದ್ರಾಬಾದ ಕರ್ನಾಟಕ ತತ್ವಪದಗಳು – ೨೦೦೨.
vi) ಬಸವೇಶ್ವರ ಮತ್ತು ಪುರಂದರದಾಸ (ಪರಿಷ್ಕೃತ ಆವರಣ)-೨೦೦೬.
vii) ಬಂಡಾಯ ಜಾನಪದ – ೨೦೦೬.
viii) ಶೂನ್ಯಸಂಪಾದನೆ ಪ್ರಸ್ತುತ ಸವಾಲುಗಳು-೨೦೦೭.
ix) ಬಸವ ಸಂಸ್ಕೃತಿ-ಸಾಮಾಜಿಕ ನ್ಯಾಯ-೨೦೦೭.

**೫. ಸಾಹಿತ್ಯ ವಿಮರ್ಶೆ-೧೧ ಕೃತಿಗಳು:**

i) ಹೊಸದಿಕ್ಕು-೧೯೯೦.
ii) ವಚನ ಚಳವಳಿ-೧೯೯೨.
iii) ಸಾಹಿತ್ಯ ಸಂಗತಿ-೧೯೯೪.
iv) ಬಂಡಾಯ ಕಾವ್ಯ ಮತ್ತು ಜನಪದ-೧೯೯೭.
v) ಅನಂತಮೂರ್ತಿ ಕೃತಿಗಳು – ೧೯೯೭.
vi) ನಿರಂಜನ ಕೃತಿಗಳು-೧೯೯೯.
vii) ಬಂಡಾಯ ಸಾಹಿತ್ಯ-೨೦೦೧.
viii) ಬಸವಪ್ರಜ್ಞೆ ಮತ್ತು ಅಪವರ್ಗೀಕರಣ-೨೦೦೪
ix) ವಚನಕಾರರು ಮತ್ತು ದಲಿತ ಸಂವೇದನೆ-೨೦೦೪.
x) ಸಾಹಿತ್ಯ ವಿಮರ್ಶೆ-೨೦೦೫.
xi) ವಚನ ಸಂಸ್ಕೃತಿ-೨೦೦೭.

**೬. ವಿವಿಧ ವಿಶ್ವವಿದ್ಯಾಲಯಗಳ ಪ್ರಚಾರೋಪನ್ಯಾಸ ಮಾಲೆ ಹಾಗೂ ಇತರ ಕಿರುಕೃತಿಗಳು-೧೧ ಕೃತಿಗಳು:**

i) ಬೀದರ ಜಿಲ್ಲಾ ಸಾಂಸ್ಕೃತಕ ಅಧ್ಯಯನ-೧೯೮೨.
ii) ಜಾನಪದ ಕಾವ್ಯದಲ್ಲಿ ಪ್ರಣಯ ಚಿತ್ರಣ-೧೯೮೨.
iii) ಅಂಬಿಗರ ಚೌಡಯ್ಯ-೧೯೮೬.
iv) ಬಸವಣ್ಣ ಮತ್ತು ಪ್ರಸ್ತುತತೆ-೧೯೯೧.
v) ಕರ್ಮ ಸಿದ್ಧಾಂತ-೧೯೯೮.

vi) ಶರಣರ-ದಾಸರ ಸಾಹಿತ್ಯ ರೂಪಗಳು-೨೦೦೧.

vii) ಆದಯ್ಯ-೨೦೦೧.

viii) ವಚನಗಳಲ್ಲಿ ವ್ಯಕ್ತಿತ್ವ ವಿಕಾಸ-೨೦೦೩.

ix) ಮಾದಾರ ಚೆನ್ನಯ್ಯ-೨೦೦೫.

x) ಗಿರೀಶ ಕಾರ್ನಾಡ-೨೦೦೫.

xi) ಬಸವೇಶ್ವರರು-೨೦೦೬.

**೭. ಸಂಪಾದಿತ ಕೃತಿಗಳು-೧೮+೨೫ ಕೃತಿಗಳು=೪೩.**

i) ದಲಿತ ಸೂರ್ಯ-೧೯೯೦.

ii) ಕಲ್ಯಾಣ ನಾಡಿನ ಕೆಂಪು ಕವಿತೆಗಳು-೧೯೯೦.

iii) ಆಯ್ದ ಕವನಗಳು-೧೯೯೧.

iv) ಶರಣರ ಬಂಡಾಯದ ವಚನಗಳು-೧೯೯೧.

v) ಬಂಡಾಯ ಸಾಹಿತ್ಯದ ತಾತ್ವಿಕ ನೆಲೆಗಳು-೧೯೯೨.

vi) ವೈಶಾಖದ ವೈವಿಧ್ಯ-೧೯೯೫.

vii) ಬಲ್ಲಾಳರ ಬಂಡಾಯ ಸಮೀಕ್ಷೆ-೧೯೯೫.

viii) ಸಾಹಿತ್ಯ ಮತ್ತು ಸಮೂಹ ಮಾಧ್ಯಮಗಳು-೧೯೯೭.

ix) ಗಾಳಿಗಂಧ-೨೦೦೨.

x) ಪುರಂದರದಾಸರ ಆಯ್ದ ಕೀರ್ತನೆಗಳು-೨೦೦೩.

xi) ಪುರಂದರದಾಸರ ಕೀರ್ತನೆಗಳು-೨೦೦೪ (ಭಾಗ-೧).

xii) ಪುರಂದರ ದಾಸರ ಕೀರ್ತನೆಗಳು ಭಾಗ-೨-೨೦೦೪.

xiii) ಆಯ್ದ ಕೀರ್ತನೆಗಳು-೨೦೦೪.

xiv) ಅನಂತಾದ್ರೀಶ್ವರ ಹಾಗೂ ಹೆನ್ನೆರಂಗ ದಾಸರ ಕೀರ್ತನಗಳು-೨೦೦೪.

xv) ಅಸ್ಗಿಹಾಳ ಗೋವಿಂದ ದಾಸರ ಹಾಗೂ ನರಹರಿ ದಾಸರ ಕೀರ್ತನೆಗಳು-೨೦೦೪.

xvi) ಚಿನ್ನ ಕತೆಗಳು-೨೦೦೫.

xvii) ಮಾಲೆ-೨೦೦೫.

xviii) ಹೊಸಗನ್ನಡ ಕವಿತೆಗಳು-೨೦೦೫

ಹಾಗೂ ಗುಲಬರ್ಗಾ ವಿಶ್ವವಿದ್ಯಾಲಯದ ಪ್ರಸಾರಾಂಗದಿಂದ ಬೆಳ್ಳಿ-ಬೆಳಕು ಮಾಲೆಯಲ್ಲಿ ಪ್ರಕಟವಾದ ೨೫ ಪುಸ್ತಕಗಳ ಪ್ರಧಾನ ಸಂಪಾದಕರು (ಪ್ರಾತಿನಿಧಿಕ ಸಂಕಲನಗಳು ಹಾಗೂ ನಮ್ಮ ಹಿರಿಯರು ನಮ್ಮ ಹೆಮ್ಮೆಮಾಲೆ ಕೃತಿಗಳು ಮತ್ತು ಜಿಲ್ಲಾ ದರ್ಶನಗಳು)

೮. ಪ್ರಶಸ್ತಿ-ಪುರಸ್ಕಾರಃ

೧. ನನ್ನವರ ಹಾಡು ಕವನ ಸಂಕಲನಕ್ಕೆ ದೇವರಾಜ ಬಹದ್ದೂರ ಪ್ರಶಸ್ತಿ.

೨. ಮೂಡಲಕ-ಕೆಂಪು ಮೂಡ್ಯಾವ ಕವನ ಸಂಕಲನಕ್ಕೆ ಗುಲಬರ್ಗಾ ವಿಶ್ವವಿದ್ಯಾಲಯ ಪುರಸ್ಕಾರ.

೩. ದನಿಯೆತ್ತಿ ಹಾಡೇನ ಕವನ ಸಂಕಲನಕ್ಕೆ ಕುವೆಂಪು ಪ್ರಶಸ್ತಿ.

೪. ಬೆಳದಿಂಗಳು ಬಿಸಿಲಾಯಿತು ಕವನ ಸಂಕಲನಕ್ಕೆ ಕೇರಳದ ಪೆರ್ಲಕೃಷ್ಣಭಟ್ಟ ಪ್ರಥಮ ಬಹುಮಾನ.

೫. ಪದಕಟ್ಟಿ ಹಾಡೇನ ಕವನ ಸಂಕಲನಕ್ಕೆ ಗುಲಬರ್ಗಾ ವಿಶ್ವವಿದ್ಯಾಲಯ ಪ್ರಶಸ್ತಿ.

೬. ನರಬಲಿ ನಾಟಕಕ್ಕೆ ಉಡುಪಿಯ ರಂಗಭೂಮಿ ಬಹುಮಾನ.

೭. ಬೆಳ್ಳಕ್ಕಿ ಸಾಲು ನಾಟಕ ಗುಲಬರ್ಗಾ ವಿಶ್ವವಿದ್ಯಾಲಯ ಬಿ.ಎ. ಪಠ್ಯ.

೮. ಹೊಸದಿಕ್ಕು ವಿಮರ್ಶಾ ಕೃತಿಗೆ ಕಾವ್ಯಾನಂದ ಪ್ರಶಸ್ತಿ.

೯. ವಚನ ಚಳುವಳಿ ವಿಮರ್ಶಾ ಕೃತಿಗೆ.

೧೧. ಬಂಡಾಯ ಕಾವ್ಯ ಮತ್ತು ಜಾನಪದ ವಿಮರ್ಶಾ ಕೃತಿಗೆ ಸಾಹಿತ್ಯಶ್ರೀ ಪ್ರಶಸ್ತಿ.

೧೨. ನಾಕು ಬೀದಿ ನಾಟಕಗಳು ನಾಟಕಕ್ಕೆ ಗೋರೂರು ಪ್ರಶಸ್ತಿ.

೧೩. ಕೆಂಡಸಂಪಿಗೆ ಕವನ ಸಂಕಲನಕ್ಕೆ ಜಿ.ಎಸ್.ಎಸ್. ಪ್ರಶಸ್ತಿ.

೧೪. ಕೆಂಡಸಂಪಿಗೆ ಕವನ ಸಂಕಲನಕ್ಕೆ ತಾಯಿ ಪ್ರಕಾಶನದ ಪ್ರಥಮ ಬಹುಮಾನ.

೧೫. ಸಬರದ ಕವಿತೆಗಳು ಕವನ ಸಂಕಲನಕ್ಕೆ ವಿಶ್ವೇಶ್ವರಯ್ಯ ದಶಮಾನೋತ್ಸವ ಸಾಹಿತ್ಯ ಪ್ರಶಸ್ತಿ.

೧೬. ಸಮುದಾಯ ಮತ್ತು ಸಂಸ್ಕೃತಿ ಕೃತಿಗೆ ರುಕ್ಮಿಣಿಬಾಯಿ ಪುರಸ್ಕಾರ.

೧೭. ಕನ್ನಡ ಸಾಹಿತ್ಯ ಸೇವೆಗಾಗಿ-ಸಾಹಿತ್ಯ ಪುರಸ್ಕಾರ ಹಾಗೂ ಚಿನ್ನದ ಪದಕ ಅಖಿಲ ಭಾರತ ಹಿಂದಿ ಪ್ರಚಾರ ಸಭಾ, ಚೆನ್ನೈ.

೧೮. ಪ್ರಸಾರಾಂಗದ ನಿರ್ದೇಶಕರಾಗಿ ೭೫ ಕಱುತಿಗಳನ್ನು ಪ್ರಕಟಿಸಿ ಸಾಧನೆಗಾಗಿ ಗುಲಬರ್ಗಾ ವಾರದಸ್ಫೋಟ ಪತ್ರಿಕಾ ಬಳಗದಿಂದ ಸುವರ್ಣ ಕರ್ನಾಟಕ ಪ್ರಶಸ್ತಿ.

೧೯. ಸಾಹಿತ್ಯ ಸೇವೆಗಾಗಿ ಕೊಪ್ಪಳ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ ಹಾಗೂ ನಾಗರಿಕ ವೇದಿಕೆಯಿಂದ ಸಿದ್ದಯ್ಯ ಪುರಾಣಿಕ ಪ್ರಶಸ್ತಿ.

೨೦. ಗುಲಬರ್ಗಾದ ಮಹಾಂತ ಜ್ಯೋತಿ ಪ್ರತಿಷ್ಠಾನದಿಂದ ಸಾಹಿತ್ಯ ಸೇವೆಗಾಗಿ ಕರ್ನಾಟಕ ಜ್ಯೋತಿ ಪ್ರಶಸ್ತಿ.

೨೧. ಜೇನ ಹನಿಗಳು ಕವನ ಸಂಕಲನಕ್ಕೆ ಮೈಸೂರಿನ ಚುಟುಕು ಭೂಷಣ ಪ್ರಶಸ್ತಿ.

೨೨. ಗುಬ್ಬಿಯೊಂದು ಗೂಡು ಕಟ್ಟ್ಯದೊ ಕವನ ಸಂಕಲನಕ್ಕೆ ಕಯ್ಯಾರ ಕಿಞ್ಞಣ್ಣರೈ ಪ್ರಶಸ್ತಿ ಹಾಗೂ ನಿರತ-ಸಾಹಿತ್ಯ ಪ್ರಶಸ್ತಿ ದಕ್ಷಿಣ ಕನ್ನಡ.

೨೩. ಐದು ಬೀದಿ ನಾಟಕಗಳು ಕೃತಿಗೆ ಗುಲಬರ್ಗಾ ವಿಶ್ವವಿದ್ಯಾಲಯ ರಾಜ್ಯೋತ್ಸವ ಪ್ರಶಸ್ತಿ.

೨೪. ಸಾಹಿತ್ಯ ವಿಮರ್ಶೆ ಕೃತಿಗೆ ಸೇಡಂ ಸಂಸ್ಥೆಯ ವಿಶ್ವಪ್ರಶಸ್ತಿ ಹಾಗೂ ಗುರುಮಠಕಲ್ ಪ್ರತಿಷ್ಠಾನದ ಅಕ್ಷರಲೋಕದ ನಕ್ಷತ್ರ ಪ್ರಶಸ್ತಿ.

೨೫. ಬಸವೇಶ್ವರ-ಪುರಂದರದಾಸ ಕೃತಿಗೆ ಗದುಗಿನ ಪಂಡಿತ ಪುಟ್ಟರಾಜ ಗವಾಯಿಗಳ ಪ್ರಶಸ್ತಿ.

೯. ಸಂಶೋಧನಾ ಯೋಜನೆಗಳು

:೧. ಪ್ರಗತಿಶೀಲ ಕಾದಂಬರಿಗಳು-೧೯೯-ಗುಲಬರ್ಗಾ ವಿಶ್ವವಿದ್ಯಾಲಯ ಧನಸಹಾಯ.

:೨. ಹೈದ್ರಾಬಾದ ಕರ್ನಾಟಕ ತತ್ವಪದ ಸಾಹಿತ್ಯ-೧೯೯೨ ಗುಲಬರ್ಗಾ ವಿಶ್ವವಿದ್ಯಾಲಯ ಧನಸಹಾಯ.

:೩. ಹೊಸಗನ್ನಡ ಸಾಹಿತ್ಯ ಚರಿತ್ರೆ-೧೯೯೪ - ಯು.ಜಿ.ಸಿ. ಧನ ಸಹಾಯ ನವದೆಹಲಿ.

**೧೦. ಸಾಹಿತ್ಯ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಸಂಸ್ಥೆಗಳ ಸದಸ್ಯ / ಅಧ್ಯಕ್ಷ:**

:೧. ಸದಸ್ಯರು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು-೧೯೮೬.

:೨. ರಾಜ್ಯ ಸಂಚಾಲಕರು, ಕರ್ನಾಟಕ ರಾಜ್ಯ, ಬಂಡಾಯ ಸಾಹಿತ್ಯ ಸಂಘಟನೆ-೧೯೮೯.

:೩. ಆಜೀವನ ಸದಸ್ಯರು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು-೧೯೮೦.

:೪. ಸಂಸ್ಥಾಪಕ ಸದಸ್ಯರುವ ಜಿಲ್ಲಾ ಸಮುದಾಯ ಘಟಕ, ಬೀದರ-೧೯೮೦.

:೫. ಅಧ್ಯಕ್ಷರು, ಅಭಿನಯ ಗಂಗೋತ್ರಿ, ಬೀದರ-೧೯೮೧.

ಃ೬. ಕಾರ್ಯಕಾರಿ ಸಮಿತಿ ಸದಸ್ಯರು ಸಮಗ್ರ ದಾಸ ಸಾಹಿತ್ಯ ಪ್ರಕಟನಾ ಸಮಿತಿ, ಕನ್ನಸ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು–೧೯೯೫.

ಃ೭. ಆಯ್ಕೆ ಸಮಿತಿ ಸದಸ್ಯರು, ಗುಲಬರ್ಗಾ ಆಕಾಶವಾಣಿ ಕೇಂದ್ರ, ಗುಲಬರ್ಗಾ–೧೯೯೮.

ಃ೮. ಸಲಹಾ ಸಮಿತಿ ಸದಸ್ಯರು ಪುರಂದರದಾಸ ಸಾಹಿತ್ಯ ಪೀಠ, ಕನ್ನಡ ವಿಶ್ವವಿದ್ಯಾಲಯ ಹಂಪಿ–೨೦೦೧.

ಃ೯. ಕಾರ್ಯಕಾರಿ ಸಮಿತಿ ಸದಸ್ಯರು, ಗುಲಬರ್ಗಾ ಜಿಲ್ಲಾ ಸಮುದಾಯ ಘಟಕ–೨೦೦೧.

ಃ೧೦. ಅಧ್ಯಕ್ಷರು, ಜನರಂಗ, ಗುಲಬರ್ಗಾ–೨೦೦೨.

ಃ೧೧. ಅಧ್ಯಕ್ಷರು, ಗುಲಬರ್ಗಾ ವಿಶ್ವವಿದ್ಯಾಲಯ ಶಿಕ್ಷಕರ ಸಂಘ ೨೦೦೩–೦೪.

ಃ೧೨. ನಿರ್ದೇಶಕರು, ಪ್ರಸಾರಾಂಗ, ಗುಲಬರ್ಗಾ ಮಹಾವಿದ್ಯಾಲಯ–೨೦೦೪.

ಃ೧೩. ನಿರ್ದೇಶಕರು, ಬಸವಾದಿ ಶರಣ ಸಾಹಿತ್ಯ ಕೇಂದ್ರ, ಗು.ವಿ.ಗು–೨೦೦೫.

೧೧. ಭಾಗವಹಿಸಿದ ಪ್ರಮುಖ ಕವಿಗೋಷ್ಠಿಗಳುಃ

ಃ೧. ದಸರಾ ಕವಿಗೋಷ್ಠಿ–ಮೈಸೂರು.

ಃ೨. ಹಂಪಿ ಉತ್ಸವ ಹಾಗೂ ನವರಸಪುರ ಉತ್ಸವ ಹಾಗೂ ಮಳಖೇಡ ಉತ್ಸವದ ಕವಿಗೋಷ್ಠಿಗಳು.

ಃ೩. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾಂವಿಯ ಕವಿಗೋಷ್ಠಿ.

ಃ೪. ಕುವೆಂಪು ಅಧ್ಯಕ್ಷತೆಯಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದ ಕವಿಗೋಷ್ಠಿ.

ಃ೫. ಬಂಡಾಯ ಸಾಹಿತ್ಯ ಸಮ್ಮೇಳನಗಳಲ್ಲಿ ನಡೆದ ಕವಿಗೋಷ್ಠಿಗಳು.

ಃ೬. ಜಿಲ್ಲಾ ಸಾಹಿತ್ಯ ಸಮ್ಮೇಳನಗಳಲ್ಲಿ ನಡೆದ ಕವಿಗೋಷ್ಠಿಗಳು.

ಃ೭. ಅಕಾಡೆಮಿಯ ನೆರವಿನಿಂದ ನಡೆದ ಕವಿಗೋಷ್ಠಿಗಳು.

ಃ೮. ಆಕಾಶವಾಣಿ ದೂರದರ್ಶನದ ಕವಿಗೋಷ್ಠಿಗಳು.

ಃ೯. ಗಣರಾಜ್ಯೋತ್ಸವ ನಿಮಿತ್ಯ ಭೂಪಾಲದಲ್ಲಿ ನಡೆದ ಬಹುಭಾಷಾ ಕವಿಗೋಷ್ಠಿ–೨೦೦೦ (ಕರ್ನಾಟಕ ಪ್ರತಿನಿಧಿ).

೧೨. ಪ್ರಬಂಧ ಮಂಡಿಸಿದ ಪ್ರಮುಖ ವಿಚಾರ ಸಂಕಿರಣಗಳು / ಕಮ್ಮಟಗಳು / ಸಮ್ಮೇಳನಗಳು:

೧. ಬಂಡಾಯ ಸಾಹಿತ್ಯ ಸಮ್ಮೇಳನಗಳಲ್ಲಿ ನಡೆದ ವಿಚಾರ ಗೋಷ್ಠಿಗಳು.
೨. ಕನ್ನಡ ಸಾಹಿತ್ಯ ಪರಿಷತ್ ಏರ್ಪಡಿಸಿದ ವಿಚಾರ ಸಂಕಿರಣಗಳು.
೩. ವಿವಿಧ ಅಕಾಡೆಮಿಗಳು ಏರ್ಪಡಿಸಿದ ವಿಚಾರ ಸಂಕಿರಣಗಳು.
೪. ವಿವಿಧ ವಿಶ್ವವಿದ್ಯಾಲಯಗಳು ಏರ್ಪಡಿಸಿದ ವಿಚಾರ ಸಂಕಿರಣಗಳು.
೫. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಸಮ್ಮೇಳನಗಳು.
೬. ಕಲ್ಯಾಣ ನಾಡಿನ ಶರಣ ಸಾಹಿತ ಪರಿಷತ್ತಿನ ಸಮ್ಮೇಳನಗಳು.
೭. ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳು.
೮. ಕರ್ನಾಟಕ ಸಾಹಿತ್ಯ ಅಕಾಡೆಮಿ ಕಮ್ಮಟದ ಉಪನಿರ್ದೇಶಕ–೧೯೮೪.
೯. ಮೈಸೂರ ರಂಗಾಯಣ ಏರ್ಪಡಿಸಿದ್ದ ನಾಟಕ ರಚನಾ ಕಮ್ಮಟ ೧೯೯೯–೨೦೦೦.
೧೦. ಮೈಸೂರು ಸಮುದಾಯ ಮತ್ತು ಕರ್ನಾಟಕ ಶಿಕ್ಷಣ ಇಲಾಖೆ ಏರ್ಪಡಿಸಿದ ನಾಟಕ ರಚನಾ ಕಮ್ಮಟ–೧೯೯೯.
೧೧. ಮುಂಬೈ ವಿಶ್ವವಿದ್ಯಾಲಯ ಏರ್ಪಡಿಸಿದ ವಿಚಾರ ಸಂಕಿರಣ.
೧೨. ಸಾಹಿತ್ಯ ಅಕಾಡೆಮಿ, ಜಾನಪದ ಅಕಾಡೆಮಿ, ನಾಟಕ ಅಕಾಡೆಮಿಗಳು ಏರ್ಪಡಿಸಿದ ವಿಚಾರ ಸಂಕಿರಣಗಳು.
೧೩. ವಿಶ್ವವಿದ್ಯಾಲಯಗಳು ಹಾಗೂ ಸರಕಾರ ಏರ್ಪಡಿಸಿದ ಕಮ್ಮಟಗಳು ಇತ್ಯಾದಿ.
೧೪. ಕರ್ನಾಟಕ ಸರಕಾರದ ಜಲನಿರ್ಮಲ ಯೋಜನೆಯ ನಾಟಕ ರಚನಾ ಶಿಬಿರ ಮೈಸೂರು.



# ಗೊರೂರು ಪ್ರತಿಷ್ಠಾನ (ರಿ.)

(ಹಿರಿಯ ಸಾಹಿತಿ ದಿವಂಗತ ಡಾ|| ಗೊರೂರು ರಾಮಸ್ವಾಮಿ ಅಯ್ಯಂಗಾರ್ ಸ್ಮಾರಕ ಪ್ರತಿಷ್ಠಾನ)
ನಂ. 27, ಪ್ರಥಮ ಮಹಡಿ, ಕಾಟನ್‌ಪೇಟೆ ಮುಖ್ಯರಸ್ತೆ ಬೆಂಗಳೂರು - 560 053.
ದೂರವಾಣಿ : 2877750/3300918/9845006364

## ಗೊರೂರು ಸಾಹಿತ್ಯ ಪ್ರಶಸ್ತಿ

ಶ್ರೇಷ್ಠ ಪುಸ್ತಕಗಳಿಗೆ ಪುರಸ್ಕಾರ

ಡಾ|| ಬಸವರಾಜ ಸಬರದ

'ನಾಲ್ಕು ಬೀದಿ ನಾಟಕಗಳು' ನಾಟಕ

| | | | |
|---|---|---|---|
| ದಿ|| ಡಾ|| ಪು.ತಿ.ನ | ಎಸ್. ಲಲಿತಾರಂಗಸ್ವಾಮಿ | ನಿಟ್ಟೂರು ಶ್ರೀನಿವಾಸರಾವ್ | ಸು. ರಂಗಸ್ವಾಮಿ |
| ಪ್ರಥಮ ಅಧ್ಯಕ್ಷರು | ಅಧ್ಯಕ್ಷರು | ಗೌರವಾಧ್ಯಕ್ಷರು | ಸಂಸ್ಥಾಪಕ ಕಾರ್ಯದರ್ಶಿ |

## ಅಭಿನಂದನೆಗಳು

# ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ




## ಪ್ರಸಾರಾಂಗ

## ಕರ್ನಾಟಕ ರಾಜ್ಯೋತ್ಸವ ದಿನಾಚರಣೆ ೨೦೦೫

## ಪ್ರಶಸ್ತಿ ಪತ್ರ

ಗುಲಬರ್ಗಾ ವಿಶ್ವವಿದ್ಯಾಲಯವು ಹೈದರಾಬಾದ ಕರ್ನಾಟಕ ಪ್ರದೇಶದ ಪುಸ್ತಕ ಲೇಖಕರಿಗೆ / ಚಿತ್ರಕಲಾವಿದರಿಗೆ ಗೌರವಧನ ನೀಡುವ ಯೋಜನೆಯ ಅಂಗವಾಗಿ

ಶ್ರೀ / ಶ್ರೀಮತಿ ಡಾ. ಬಸವರಾಜ ಸಬರದ

ಅವರ ೨೦೦೫ ರಲ್ಲಿ ಪ್ರಕಟವಾದ ಪುಸ್ತಕ / ~~ಕಲಾಕೃತಿ~~ ಎರಡು ಬೀದಿ ನಾಟಕಗಳು ಯನ್ನು

ಉತ್ತಮವೆಂದು ಪರಿಗಣಿಸಿ ಎರಡು ಸಾವಿರ ರೂಪಾಯಿಗಳ ಗೌರವಧನ ಹಾಗೂ ಈ ಪ್ರಶಸ್ತಿ ಪತ್ರವನ್ನು ನೀಡಲಾಗಿದೆ.

ನವ್ಹೆಂಬರ್ ೨೦೦೫ | ನಿರ್ದೇಶಕರು | Mulimani<br>ಕುಲಪತಿಗಳು

ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು

## ಅಭಿನಂದನಾ ಪತ್ರ

ಶ್ರೀಮತಿ / ಶ್ರೀ ಡಾ|| ಬಸವರಾಜ ಹಬರದ ರಂಗಚಿಂತಕರು ಗುಲಬರ್ಗಾ ಇವರು

ಗುಲಬರ್ಗಾ ಜಿಲ್ಲೆ ಸೇಡಂ ಪಟ್ಟಣದಲ್ಲಿ ಕರ್ನಾಟಕ ನಾಟಕ ಅಕಾಡೆಮಿಯಿಂದ ದಿನಾಂಕ 12, 13, 14ನೇ ಜುಲೈ 2003ರಂದು ಜರುಗಿದ ವೃತ್ತಿ ನಾಟಕೋತ್ಸವ ಹಾಗೂ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಪಾಲ್ಗೊಂಡು ರಂಗಭೂಮಿ ಕುರಿತಾದ ವಿಚಾರ ವಿನಿಮಯ, ರಂಗ ಸಂಗೀತ ಹಾಗೂ ರಂಗಾಭಿನಯ ಹಂಚಿಕೊಂಡಿದ್ದಾರೆ. ಅವರಿಗೆ ನಾಟಕ ಅಕಾಡೆಮಿ ಪರವಾಗಿ ಹೃತ್ಪೂರ್ವಕ ಅಭಿನಂದನೆಗಳು.

| | | |
|---|---|---|
| ಆರ್. ಎಸ್. ದಳವಾಯಿ | ಆರ್. ನಾಗೇಶ್ | ಮಲ್ಲಿಕಾರ್ಜುನ ಕಡಕೋಳ |
| ರಿಜಿಸ್ಟ್ರಾರ್<br>ಕರ್ನಾಟಕ ನಾಟಕ ಅಕಾಡೆಮಿ<br>ಬೆಂಗಳೂರು. | ಅಧ್ಯಕ್ಷರು<br>ಕರ್ನಾಟಕ ನಾಟಕ ಅಕಾಡೆಮಿ<br>ಬೆಂಗಳೂರು. | ಸದಸ್ಯ - ಸಂಚಾಲಕರು<br>ಕರ್ನಾಟಕ ನಾಟಕ ಅಕಾಡೆಮಿ<br>ಬೆಂಗಳೂರು. |

ಸಹಕಾರ : ನವರಂಗ ನಾಟ್ಯ ನಿಕೇತನ ಸೇಡಂ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಗುಲಬರ್ಗಾ ಜಿಲ್ಲೆ ಮತ್ತು ಗುಲಬರ್ಗಾ ವಿಭಾಗ

ESTD : 1965



# RANGABHOOMI

(REGD.)

REGISTRATION NO.
DATED : 16-11-66

(AFFILIATED TO KARNATAKA NATAKA ACADEMY)

DRAMATIC & CULTURAL ASSOCIATION, AJJARKAD, UDUPI - 576 101.

MANAGING COMMITTEE :

PRESIDENT :
Dr. H. SHANTARAM, M. Sc. Ph. D. (Lond.) D.I.C. (Lond)
PHONES :
OFFICE : 70236 RESI : 70450

VICE PRESIDENTS :
SRI M. MOHANDAS PAI
SRI U. DAMODAR, B.A., LL.B.

GENERAL SECRETARY :
SRI K. ANANDA GANIGA
PHONES :
OFFICE : 21191 RESI : 23212

SECRETARIES :
SRI N. RAJAGOPAL BALLAL
SRI ... VASUDEVA RAO M.A., B.Sc., B.Ed.

SRI U. UPENDRA

SRI G. SUDHAKAR RAO, M.A.
SRI RAGHURAM N. PAI
SRI A. P. MITHANTHAYA, M.Com.
SRI B. RAVINDRA KOTIAN
SRI ... SRINIVASA BHAT, B.A.
SRI K. LAXMINARAYANA BHAT
SRI BHASKAR RAO KIDIYOOR

## C E R T I F I C A T E.

This is to certify that Dr. Basavaraja Sabarada, Gulbarga has been awarded III Prize for his Kannada Drama " NARA BALI " in the All India Kannada Play Writing Competition conducted by us in 1989, on the eve of the Silver Jubilee of our Association.

We wish him every success.

UDUPI
14 MAY 1994

DR. H. SHANTARAM
(President)

K. ANANDA GANIGA
(General Secretary)




ಕರ್ನಾಟಕ ನಾಟಕ ಅಕಾಡೆಮಿ ಪ್ರಶಸ್ತಿ



# 'ಅಂತಾರಾಷ್ಟ್ರೀಯ ವ್ಯಕ್ತಿ' ಪ್ರಶಸ್ತಿಗೆ ಡಾ.ಸಬರದ ಆಯ್ಕೆ

(ನಮ್ಮ ಪ್ರತಿನಿಧಿಯಿಂದ)

ಕಲಬುರ್ಗಿ, ೧೬- ಇಂಗ್ಲೆಂಡಿನ ಅಂತಾರಾಷ್ಟ್ರೀಯ ಬಯೋಗ್ರಾಫಿಕಲ್ ಸೆಂಟರ್ ಕ್ಯಾಂಬ್ರಿಜ್ ಸಂಸ್ಥೆ, ಡಾ.ಬಸವರಾಜ ಸಬರದ ಅವರ ವೈಯಕ್ತಿಕ ಸಾಧನೆ ಹಾಗೂ ನಾಯಕತ್ವದ ಸಾಧನೆಗಳನ್ನು ಗುರುತಿಸಿ ೧೯೯೬-೯೭ನೇ ಸಾಲಿನ "ಅಂತಾರಾಷ್ಟ್ರೀಯ ವ್ಯಕ್ತಿ' ಪ್ರಶಸ್ತಿಗೆ ಆಯ್ಕೆ ಮಾಡಿದೆ.

ಅದೇ ರೀತಿ ಡಾ.ಸಬರದ ಅವರ ಸಾಹಿತ್ಯ ಹಾಗೂ ಇತರ ಸಾಮಾಜಿಕ-ಸಾಂಸ್ಕೃತಿಕ ಕ್ಷೇತ್ರದ ಅಪೂರ್ವ ಸಾಧನೆಯನ್ನು ಪರಿಗಣಿಸಿ ``೨೦ನೇ ಶತಮಾನದ ಸಾಧನೆ'' ಪ್ರಶಸ್ತಿಗೂ ಕ್ಯಾಂಬ್ರಿಜ್‌ನ ಅಂತಾರಾಷ್ಟ್ರೀಯ ಬಯೋಗ್ರಾಫಿಕಲ್ ಕೇಂದ್ರ ಆಯ್ಕೆ ಮಾಡಿರುವುದಾಗಿ ಅವರು ಸಬರದ ಅವರಿಗೆ ಬರೆದ ಪತ್ರದಲ್ಲಿ ತಿಳಿಸಿದ್ದಾರೆ.

ಡಾ.ಸಬರದ ಅವರು ಕಲಬುರ್ಗಿ ವಿಶ್ವವಿದ್ಯಾಲಯದ ರಾಯಚೂರು ಸ್ನಾತಕೋತ್ತರ ಕೇಂದ್ರದಲ್ಲಿ ಕನ್ನಡ ವಿಭಾಗದ ಪ್ರೊಫೆಸರ್ ಆಗಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ೪೦ ಕೃತಿಗಳನ್ನು ಪ್ರಕಟಿಸಿದ್ದಾರೆ. ಕಾವ್ಯಾನಂದ ಪ್ರಶಸ್ತಿ ರತ್ನಾಕರ ವರ್ಣಮುದ್ರಣ ಪ್ರಶಸ್ತಿ, ಕುವೆಂಪು ಪ್ರಶಸ್ತಿ, ದೇವರಾಜ ಬಹಾದ್ದೂರ ಪ್ರಶಸ್ತಿಗಳೂ ಲಭಿಸಿವೆ.

ಪುಟ 2 ಸಂಜೆವಾಣಿ ಶನಿವಾರ 4 ನೇ ಮೇ 2002



ಕಲ್ಬುರ್ಗಿಯ ಖ್ಯಾತ ಲೇಖಕ ಡಾ.ಬಸವರಾಜ ಸಬರದ ಅವರ ಕೃತಿಗೆ ಸಂದ ಗೋರೂರು ಪ್ರಶಸ್ತಿಯನ್ನು ಅರಣ್ಯ ಖಾತೆ ಸಚಿವ ಕೆ.ಎಚ್.ರಂಗನಾಥ ಅವರು ನೀಡಿ ಗೌರವಿಸಿದರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವೆ ರಾಣಿ ಸತೀಶ್ ಅವರು ಉಪಸ್ಥಿತರಿರುವರು.



ಗುಲ್ಬರ್ಗಾ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕ ಡಾ.ಬಸವರಾಜ ಸಬರದ ಅವರಿಗೆ ಬೆಂಗಳೂರಿನಲ್ಲಿ ಇತ್ತೀಚೆಗೆ ಗೋರೂರು ಪ್ರಶಸ್ತಿಯನ್ನು ಕನ್ನಡ ಮತ್ತು ಸಂಸ್ಕೃತಿ ಸಚಿವೆ ರಾಣಿ ಸತೀಶ್ ಪ್ರದಾನ ಮಾಡಿದರು.



'ನಾಲ್ಕು ಬೀದಿ ನಾಟಕ' ಕೃತಿಗೆ ಗೋರೂರು ಪ್ರತಿಷ್ಠಾನದ ಪ್ರಶಸ್ತಿ ಪಡೆದ ಕಲ್ಬುರ್ಗಿ ವಿಶ್ವ ವಿದ್ಯಾಲಯದ ಅಧ್ಯಾಪಕ ಡಾ. ಬಸವರಾಜ ಸಬರದ ಅವರಿಗೆ ಈಚೆಗೆ ಬೆಂಗಳೂರಲ್ಲಿ ನಡೆದ ಸಮಾರಂಭದಲ್ಲಿ ಕನ್ನಡ ಸಂಸ್ಕೃತಿ ಸಚಿವೆ ರಾಣಿ ಸತೀಶ್ ಪ್ರಶಸ್ತಿ ಪ್ರದಾನ ಮಾಡಿದರು.



ಇತ್ತೀಚೆಗೆ ಬೆಂಗಳೂರಿನಲ್ಲಿ ನಡೆದ ಸಮಾರಂಭವೊಂದರಲ್ಲಿ ಕಲಬುರ್ಗಿ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ಪ್ರಾಧ್ಯಾಪಕ ಡಾ. ಬಸವರಾಜ ಸಬರದ ಅವರು ಕನ್ನಡ ಮತ್ತು ಸಂಸ್ಕೃತಿ ಖಾತೆ ಸಚಿವ ಶ್ರೀಮತಿ ರಾಣಿ ಸತೀಶ್ ಅವರಿಂದ ಗೊರೂರು ಪ್ರಶಸ್ತಿ ಸ್ವೀಕರಿಸಿದರು. ಈ ಸಂದರ್ಭದಲ್ಲಿ ಸಚಿವ ಕೆ.ಎಚ್. ರಂಗನಾಥ ಹಾಜರಿದ್ದರು. ಡಾ. ಬಸವರಾಜ ಸಬರದ ಅವರ 'ನಾಲ್ಕು ಬೀದಿ ನಾಟಕ' ಕೃತಿಗೆ ಗೊರೂರು ಪ್ರಶಸ್ತಿ ಲಭಿಸಿದೆ.

# ಗ್ರಂಥ ಋಣಿ

| ಕ್ರ. ಸಂ | ಗ್ರಂಥಗಳು | ಲೇಖಕರು ಪ್ರಕಾಶಕರು |
|---|---|---|
| ೧ | ಗ್ರಂಥಾ ತರಂಗ | ಶ್ರೀ ಸಿದ್ದಲಿಂಗ ಪಟ್ಟಣಶೆಟ್ಟಿ |
| ೨ | ಐದು ಬೀದಿ ನಾಟಕಗಳು | ಶ್ರೀ ಬಸವರಾಜ ಸಬರದ–೨೦೦೫ |
| ೩ | ಕನ್ನಡ ಸಾಹಿತ್ಯ ಕೋಶ | ಶ್ರೀ ರಾಚಪ್ಪ ದಳವಾಯಿ ನಾಲ್ಕನೇ ಆವೃತ್ತಿ ೨೦೦೩ |
| ೪ | ಬೆಳ್ಳಕ್ಕಿ ಸಾಲು | ಶ್ರೀ ಬಸವರಾಜ ಸಬರದ–೧೯೯೩ |
| ೫ | ಸಂಸ್ಕೃತ ನಾಟಕ | ಶ್ರೀ ಎಂ.ಆರ್. ಕೃಷ್ಣಶಾಸ್ತ್ರಿ ನಾಲ್ಕನೇ ಆವೃತ್ತಿ–೧೯೮೮. |
| ೬ | ಸಾಹಿತ್ಯ ಸಂಶೋಧನಾ ಮಾರ್ಗ | ಡಾ. ಸಂಗಮೇಶ ಸವದತ್ತಿಮಠ ದ್ವಿತೀಯ ಆವೃತ್ತಿ–೧೯೯೮ |
| ೭ | ಪ್ರತಿರೂಪ | ಶ್ರೀ ಬಸವರಾಜ ಸಬರದ – ೧೯೭೭. |
| ೮ | ಪ್ರಾಚೀನ ಭಾರತೀಯ ನಾಟಕ | ಶ್ರೀ ಎಚ್.ಎಚ್. ಅಣ್ಣಯ್ಯ ಗೌಡ (ಅನುವಾದ)–೧೯೭೮. |
| ೯ | ಕನ್ನಡ ನಾಟಕಗಳಲ್ಲಿ ಭಾಷೆ | ಡಾ. ಸಂಗಮೇಶ ಸವದತ್ತಿಮಠ–೧೯೯೧ |
| ೧೦ | ಸಾಹಿತ್ಯ ಸುಧೆ | ಡಾ. ವಿ. ಕಮಲಮ್ಮಾ – ೨೦೦೩. |
| ೧೧ | ನಾಲ್ಕು ಬೀದಿ ನಾಟಕಗಳು | ಡಾ. ಬಸವರಾಜ ಸಬರದ–೨೦೦೦. |
| ೧೨ | ಕನ್ನಡ ಸಾಹಿತ್ಯ ಚರಿತ್ರೆ | ಶ್ರೀ ರಂ. ಶ್ರೀ ಮುಗಳಿ (ಕಿರಿಯ ಆವೃತ್ತಿ)–೧೯೯೬. |
| ೧೩ | ನರಬಲಿ | ಡಾ. ಬಸವರಾಜ ಸಬರದ–೧೯೯೨. |
| ೧೪ | ಸಾಹಿತ್ಯ ಸಮೀಕ್ಷೆ | ಜಿ.ಎಸ್. ಶಿವರುದ್ರಪ್ಪಾ–೧೯೯೯. |
| ೧೫ | ಸಂಕ್ಷಿಪ್ತ ಕನ್ನಡ ನಿಘಂಟು | ಕನ್ನಡ ಸಾಹಿತ್ಯ ಪರಿಷತ್ತು–೨೦೦೧. |
| ೧೬ | ಬೆಳ್ಳಿ | ಡಾ. ಬಸವರಾಜ ಸಬರದ–೧೯೯೧. |

| ಕ್ರ. ಸಂ | ಗ್ರಂಥಗಳು | ಲೇಖಕರು ಪ್ರಕಾಶಕರು |
|---|---|---|
| ೧೭ | ವಚನ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು | ಪ್ರೊ. ವಿ. ಕಮಲಮ್ಮಾ. |
| ೧೮ | ಜಾನಪದ ಸಾಹಿತ್ಯ ದರ್ಶನ ಭಾಗ-೩ | ಡಾ. ಎಂ.ಎಸ್. ಸುಂಕಾಪುರ |
| ೧೯ | ರೆಕ್ಕೆ ಮೂಡಿದಾಗ | ಡಾ. ಬಸವರಾಜ ಸಬರದ-೧೯೯೧. |
| ೨೦ | ಜಾನಪದ ಜಯಂತಿ | ಶ್ರೀ ನಿಂಗಣ್ಣ ಸಣ್ಣಕ್ಕಿ-೧೯೮೨. |
| ೨೧ | ಕನ್ನಡ ನುಡಿ | ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು, ಪುಸ್ತಕ ವಿಮರ್ಶೆ. |
| ೨೨ | ಆರು ನಾಟಕಗಳು | ಎಚ್.ಎಸ್. ಶಿವಪ್ರಕಾಶ ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು ೧೯೯೩. |
| ೨೩ | ಐದು ಸಮಾಜವಾದಿ ನಾಟಕಗಳು | ಡಾ. ಚೆನ್ನಣ್ಣ ವಾಲೀಕರ್ ೧೯೯೧. |
| ೨೪ | ಕನ್ನಡ ಬಯಲಾಟ | ಡಾ. ಎಂ.ಎಸ್. ಸುಂಕಾಪುರ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ ೧೯೭೭. |
| ೨೫ | ಏಕಾಂಕ ನಾಟಕಗಳು | ಶ್ರೀ ಚಂದ್ರಕಾಂಶ ಕುಶನೂರ ಪ್ರಕಾಶಕರುಃ ಅಶ್ವಿತ ಪ್ರೀಂಟರ್ಸ್ ೧೯೮೩. |
| ೨೬ | ಬೀದಿ ನಾಟಕಗಳು | ಶ್ರೀ ಆರ್.ಕೆ. ಹುಡುಗಿ ಪ್ರಸಾರಂ ಗುಲಬರ್ಗಾ ವಿಶ್ವವಿದ್ಯಾಲಯ ಗುಲಬರ್ಗಾ ೨೦೦೫. |